5) ಟೆಂಡರ್‌ನ್ನು ಅನುಮೋದಿಸಿದಲ್ಲಿ ಟೆಂಡರ್‌ದಾರರು ಗೊತ್ತುಪಡಿಸಿರುವ ದರದಲ್ಲಿಯೇ ಗೊತ್ತುಪಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಒದಗಿಸಲು ಬದ್ಧರಿರಬೇಕು.

6) ತಯಾರಕರು ಅಥವಾ ಅವರ ಅಧಿಕೃತ ಮಾರಾಟಗಾರರ ಬಗ್ಗೆ ದಾಖಲೆ ಒದಗಿಸುವುದು ಹಾಗೂ ದರಪಟ್ಟಿ ನೀಡುವ ಫ್ಯಾಕ್ಸ್ ರೋಲ್‌ಗಳ Make ನಮೂದಿಸಬೇಕು.

7) ಒದಗಿಸುವ ಸಾಮಗ್ರಿಗಳು ದೋಷದಿಂದ ಕೂಡಿದ್ದಲ್ಲಿ ಕೂಡಲೇ ಬದಲಾಯಿಸಲು ಬದ್ಧರಿರಬೇಕು. ಇಲ್ಲದಿದ್ದಲ್ಲಿ ಅದನ್ನು ತಿರಸ್ಕರಿಸಲಾಗುವುದು.

8) ಪ್ರತಿ ತಿಂಗಳಲ್ಲಿ ಎಷ್ಟು ಮೌಲ್ಯದ ಫ್ಯಾಕ್ಸ್ ರೋಲ್‌ಗಳನ್ನು ಸರಬರಾಜು ಮಾಡಲು ಸಾಧ್ಯ ಎಂದು ಸೂಚಿಸುವುದು.

9) ಸಾಮಗ್ರಿಗಳನ್ನು ಒದಗಿಸುವಂತೆ ಪತ್ರ ಬರೆದ 10 ದಿನಗಳೊಳಗಾಗಿ ಒದಗಿಸಲು ಬದ್ಧರಿರಬೇಕು.

10) ಮುಂಗಡ ಠೇವಣಿ (ಇ.ಎಂ.ಡಿ.) ಮೊತ್ತ ರೂ.5,000-00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ. (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560001 ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು.

11) ಯಶಸ್ವಿ ಟೆಂಡರ್‌ದಾರರು ಸಾಮಗ್ರಿಗಳ ಒಟ್ಟು ಮೌಲ್ಯದ ಶೇಕಡ 5 ರಷ್ಟು ಭದ್ರತಾ ಠೇವಣಿಯನ್ನು ಡಿ.ಡಿ. ರೂಪದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ. (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು - 560 001 ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು.

12) ಖರೀದಿಸುವ ಫ್ಯಾಕ್ಸ್ ರೋಲ್‌ಗಳಿಗೆ ಸಂಬಂಧಿಸಿದಂತೆ ಚಾಲ್ತಿಯಲ್ಲಿರುವ ತೆರಿಗೆಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಿ ಸರ್ಕಾರ ನೇರವಾಗಿ ಪಾವತಿಸುವುದು.

13) ಯಶಸ್ವಿ ಟೆಂಡರ್‌ದಾರರ ಇಎಂಡಿ ಮೊತ್ತವನ್ನು ಅವಧಿ ಮುಗಿದ ನಂತರ ಯಾವುದೇ ದೂರು ಇಲ್ಲದಿದ್ದಲ್ಲಿ ಹಾಗೂ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

14) ಅಯಶಸ್ಸು ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

15) ಟೆಂಡರ್‌ಗಳನ್ನು ದಿನಾಂಕ: 22.06.2005 ರಂದು ಮಧ್ಯಾಹ್ನ 3.30 ಗಂಟೆಯೊಳಗೆ ಸಿ.ಆ.ಸು.ಇ. (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು-560 001 ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

16) ದರಪಟ್ಟಿಯೊಂದಿಗೆ ಠೇವಣಿಯನ್ನು (ಇ.ಎಂ.ಡಿ.) ಮೊತ್ತ ನೀಡದಿದ್ದಲ್ಲಿ ಮತ್ತು ಮೇಲಿನ ಅಂಶಗಳಿಗೆ ಪೂರ್ಣ ವಿವರವನ್ನು ನೀಡದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ ಇವರ ನಿರ್ಣಯವೇ ಅಂತಿಮವಾದದ್ದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

**ಅನುಬಂಧ**

ಟೆಂಡರ್ ಪ್ರಕಟಣೆಯ ಸಂಖ್ಯೆ: ಫ್ಯಾಕ್ಸ್ ರೋಲ್‌ಗಳ ಸರಬರಾಜು
ಸಿಆಸುಇ 58 ಡಿಟಿಎಂ 2005

| ಕ್ರ.ಸಂ. | ಸಾಮಗ್ರಿಗಳ ವಿವರ | ದರ (ತೂಕ:ಅಳತೆ) | ಶೇಕಡವಾರು ಕರ್ನಾಟಕ ಮಾರಾಟ ತೆರಿಗೆ:ಮರು ಮಾರಾಟ ತೆರಿಗೆ | ಶೇಕಡವಾರು ಕೇಂದ್ರ ಮಾರಾಟ ತೆರಿಗೆ |
|---|---|---|---|---|
| 1 | 2 | 3 | 4 | 5 |
| 1 | ಫ್ಯಾಕ್ಸ್ ರೋಲ್ | | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಹೆಚ್.ಕೆ. ರವಿಮೂರ್ತಿ**
ಪಿ.ಆರ್. 314
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಪೊಲೀಸ್ ಕಮೀಷನ್‌ರವರ ಕಛೇರಿ, ಬೆಂಗಳೂರು ನಗರ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಂಗ್ರಹ-3/ಟಿ.ಆರ್.ಎಂ./41/2004-05, ದಿನಾಂಕ: 17ನೇ ಮೇ 2005**

3. ಸಂಗ್ರಹಣಾ ಸಂಸ್ಥೆ - ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರು.
4. ಯೋಜನೆ - ಬೆಂಗಳೂರು ನಗರ ಸಂಚಾರದ ಆಧುನೀಕರಣದ ಬಗ್ಗೆ.

ಬೆಂಗಳೂರು ನಗರ ಸಂಚಾರ ವಿಭಾಗದ ಅನುಕೂಲಕ್ಕಾಗಿ 25 ಸಂಖ್ಯೆಯ ಸ್ಪೀಡ್ ವಿಷನ್ ಡಾಪ್ಲರ್ ರಾಡರ್ ಗನ್ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

ಟೆಂಡರ್ ಅರ್ಜಿಗಳನ್ನು ಹಾಗೂ ಈ ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯನ್ನು ದಿನಾಂಕ: 18.5.2005 ರಿಂದ 17.6.2005 ರವರೆಗೆ ಯಾವುದೇ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.500-00 ಗಳನ್ನು ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿ ಆರ್ಡರ್‌ನಲ್ಲಿ ಪಾವತಿಸಿದರೆ

ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಚಿಸುವವರು ರೂ.500-00 ಗಳಿಗೆ ಡಿ.ಡಿ. ಯನ್ನು ಪೊಲೀಸ್ ಕಮೀಷನರ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವ ವಿಳಾಸ ಹೊಂದಿದ 9' X 12' ಲಕೋಟೆಯ ಮೇಲೆ ರೂ.25-00 ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2 ರಷ್ಟು ಇ.ಎಂ.ಡಿ. ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಪೊಲೀಸ್ ಕಮೀಷನರ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್ ಮತ್ತು ಇತರೆ ಸಂಬಂಧಪಟ್ಟ ದಾಖಲೆಗಳೊಂದಿಗೆ ಈ ಕಛೇರಿಯ ಜಂಟಿ ಪೊಲೀಸ್ ಕಮೀಷನರ್, ಅಪರಾಧ I/C ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ರವರಾದ ಶ್ರೀ ಎಂ.ಸಿ. ನಾರಾಯಣ ಗೌಡ ಐಪಿಎಸ್ ಬೆಂಗಳೂರು ರವರಿಗೆ ಹೆಸರಿಸಿ ದಿನಾಂಕ: 17.6.2005 ರಂದು ಮಧ್ಯಾಹ್ನ 4.30 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ರಹಸ್ಯ ಲಕೋಟೆಯ ತುದಿಯಲ್ಲಿ (ಇಲ್ಲಿ ಉಪಕರಣಗಳ ಹೆಸರು ನಮೂದಿಸಿ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ) ಎಂದು ನಮೂದಿಸಬೇಕು ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 18.6.2005 ರಂದು ಸಂಜೆ 4.30 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಚೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಉಪಕರಣಕ್ಕೆ ಇ.ಎಂ.ಡಿ. ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ಹೆಚ್ಚು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಒಂದು ವೇಳೆ, ಮೇಲೆ ಸೂಚಿಸಿದ ದಿನಾಂಕಗಳಂದು ಅನಿವಾರ್ಯ ಕಾರಣಗಳಿಂದ ರಜೆ ಘೋಷಿಸಲ್ಪಟ್ಟಲ್ಲಿ ಮರುದಿನ ಅದೇ ಸಮಯಕ್ಕೆ ಟೆಂಡರ್ ಪ್ರಕ್ರಿಯೆಗಳನ್ನು ನಡೆಸಲಾಗುವುದು.

ಎಂ.ಸಿ. ನಾರಾಯಣ ಗೌಡ

ಪಿ.ಆರ್. 302

ಜಂಟಿ ಪೊಲೀಸ್ ಆಯುಕ್ತರು, ಅಪರಾಧ I/C ಅಪರ ಪೊಲೀಸ್ ಆಯುಕ್ತರು,
(ಆಡಳಿತ) ಹಾಗೂ (ಟೆಂಡರ್ ಆಹ್ವಾನಿಸುವ ಪ್ರಾಧಿಕಾರ) ಬೆಂಗಳೂರು ನಗರ.

## PUBLIC WORKS DEPARTMENT

**Office of the Executive Engineer, P.W.D. Division, Bijapur**

**TIME EXTENSION TENDER NOTIFICATION**

**(TWO COVER SYSTEM)**

**No. PWD/DN/BJ/AE/NABARD-X/2005-06/538, Dated: 20th May 2005**

In continuation of tender notification No. PWD/DN/BJ/AE/NABARD-X/2004-05/3127 dated: 27.12.2004 and time extension notification No.3493 dated: 25.01.2005 & No.315 dated 29.5.2005 for the works are renotified are as follows:

| Sl. No. | Name of work | Amount put to Tender Rs.in lakhs | E.M.D. in Rs. | Cost of Tender form including Tax in Rs. | Class of Contrac-tors | Period stipulated for completion including monsoon period |
|---|---|---|---|---|---|---|
| 1 | 2 | 3 | 4 | 5 | 6 | 7 |
| **Works under NABARD R.I.D.F. X (Third Batch)** | | | | | | |
| 1 | Improvements to Indi-Rly station to Airsanga-Lachayan-road in Indi Tq. | 70.00 | 70000/- | 5500/- | Class-I | 9 Months |
| 2 | Improvements to Yakkundi-Nidoni-Dhanyal-Tajapur to Join S.H.s12 Bijapur Tq. | 70.00 | 70,000/- | 5500/- | Class-I | 9 Months |
| 3 | Improvements to Jalageri-Takkalki-Kalakavatagi Babanagar (Ist Phase) in Bijapur Tq. | 49.00 | 49000/- | 3300/- | Class-I | 6 Months |
| 4 | Improvements to Mulwad-Mangouli-Ukkali Road in B, Bagewadi Tq. | 86.25 | 86250/- | 5500/- | Class-I | 12 Months |
| 5 | Improvements to Mulwad-Almatti road B. Bagewadi Tq. | 60.00 | 60,000/- | 5500/- | Class-I | 9 Months |

| 1 | 2 | 3 | 4 | 5 | 6 | 7 |
|---|---|---|---|---|---|---|
| 6 | Impts to Telgi cross to Yandal road. in B, Bagewadi Tq. | 80.72 | 80,720/- | 5500/- | Class-I | 12 Months |
| 7 | Impts to Rugi cross to Hiremosali Road in Indi Tq. | 78.00 | 78,000/- | 5500/- | Class-I | 9 Months |

**LAST DATE FOR**
1) Receipt of application up to 5.30 P.M. 20.06.2005
2) Issue of Tender Documents upto 5.30 P.M. 23.06.2005
3) Receipt to Tender up to 4.00 P.M. 27.06.2005
4) Date of opening of Technical Bids 28.06.2005

**Note:-**

1) The technical bid is not applicable for the work of Sl.No.3.

There are no changes in tender conditions in the tender notification mentioned earlier. If the above said dates declared as holidays the forth coming working day is to be considered.

2) The Deflect liability period after completion of works is 24 months from the concerned tenderer.

P.R.303 Executive Engineer, P.W.D. Division, Bijapur.

**ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಂಗ್ರಹ-3/ಟಿ.ಆರ್.ಎಂ./40/2004-05, ದಿನಾಂಕ: 17ನೇ ಮೇ 2005**

1. ಸಂಗ್ರಹಣಾ ಸಂಸ್ಥೆ - ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು.
2. ಯೋಜನೆ - ಬೆಂಗಳೂರು ನಗರ ಸಂಚಾರದ ಆಧುನೀಕರಣದ ಬಗ್ಗೆ.

ಬೆಂಗಳೂರು ನಗರ ಸಂಚಾರ ವಿಭಾಗದ ಅನುಕೂಲಕ್ಕಾಗಿ 50 ಸಂಖ್ಯೆಯ ಆಲ್ಕೋ ಬ್ರೆತ್ ಅನಲೈಸರ್ಸ್ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

ಟೆಂಡರ್ ಅರ್ಜಿಗಳನ್ನು ಹಾಗೂ ಈ ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯನ್ನು ದಿನಾಂಕ: 18.5.2005 ರಿಂದ 17.6.2005 ರವರೆಗೆ ಯಾವುದೇ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.500-00 ಗಳನ್ನು ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿ ಆರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.500-00 ಗಳಿಗೆ ಡಿ.ಡಿ. ಯನ್ನು ಪೊಲೀಸ್ ಕಮೀಷನರ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವ ವಿಳಾಸ ಹೊಂದಿದ 9' X 12' ಲಕೋಟೆಯ ಮೇಲೆ ರೂ.25-00 ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2 ರಷ್ಟು ಇ.ಎಂ.ಡಿ. ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಪೊಲೀಸ್ ಕಮೀಷನರ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್ ಮತ್ತು ಇತರೆ ಸಂಬಂಧಪಟ್ಟ ದಾಖಲೆಗಳೊಂದಿಗೆ ಈ ಕಛೇರಿಯ ಜಂಟಿ ಪೊಲೀಸ್ ಕಮೀಷನರ್, ಅಪರಾಧ I/C ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ರವರಾದ ಶ್ರೀ ಎಂ.ಸಿ. ನಾರಾಯಣ ಗೌಡ ಐಪಿಎಸ್ ಬೆಂಗಳೂರು ರವರಿಗೆ ಹೆಸರಿಸಿ ದಿನಾಂಕ: 17.6.2005 ರಂದು ಮಧ್ಯಾಹ್ನ 4.30 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ರಹಸ್ಯ ಲಕೋಟೆಯ ತುದಿಯಲ್ಲಿ (ಇಲ್ಲಿ ಉಪಕರಣಗಳ ಹೆಸರು ನಮೂದಿಸಿ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ) ಎಂದು ನಮೂದಿಸಬೇಕು ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 18.6.2005 ರಂದು ಸಂಜೆ 4.30 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಉಪಕರಣಕ್ಕೆ ಇ.ಎಂ.ಡಿ. ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ಹೆಚ್ಚು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಒಂದು ವೇಳೆ, ಮೇಲೆ ಸೂಚಿಸಿದ ದಿನಾಂಕಗಳಂದು ಅನಿವಾರ್ಯ ಕಾರಣಗಳಿಂದ ರಜೆ ಘೋಷಿಸಲ್ಪಟ್ಟಲ್ಲಿ ಮರುದಿನ ಅದೇ ಸಮಯಕ್ಕೆ ಟೆಂಡರ್ ಪ್ರಕ್ರಿಯೆಗಳನ್ನು ನಡೆಸಲಾಗುವುದು.

**ಎಂ.ಸಿ. ನಾರಾಯಣ ಗೌಡ**

ಪಿ.ಆರ್. 304

ಜಂಟಿ ಪೊಲೀಸ್ ಆಯುಕ್ತರು, ಅಪರಾಧ I/C ಅಪರ ಪೊಲೀಸ್ ಆಯುಕ್ತರು,
(ಆಡಳಿತ) ಹಾಗೂ (ಟೆಂಡರ್ ಆಹ್ವಾನಿಸುವ ಪ್ರಾಧಿಕಾರ) ಬೆಂಗಳೂರು ನಗರ.

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಸಂಕ್ಷಿಪ್ತ ಟೆಂಡರ್-ಕಂ-ಹರಾಜು ಪ್ರಕಟಣೆ

**ಸಂಖ್ಯೆ: ಎ4:ಎಂಎಫ್‌ಪಿಸಿಆರ್-6/2005-06, ದಿನಾಂಕ: 26ನೇ ಮೇ 2005**

**ವಿಷಯ:** 2005-07ನೇ ಸಾಲಿಗೆ ಶಿವಮೊಗ್ಗ ಅರಣ್ಯ ವಿಭಾಗದ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಟೆಂಡರ್-ಕಂ-ಹರಾಜು.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ, ಶಿವಮೊಗ್ಗ ಅರಣ್ಯ ವಿಭಾಗಕ್ಕೆ ಸೇರಿದ ಸರ್ಕಾರಿ ಅರಣ್ಯಗಳು, ಕಾದಿಟ್ಟ ಅರಣ್ಯಗಳು, ಕಿರು ಅರಣ್ಯಗಳು, ಅನುಭೋಗದಲ್ಲಿರುವ ಸರ್ಕಾರಿ ಜಮೀನು ಹಾಗೂ ಇತರೆ ಅರಣ್ಯ ಪ್ರದೇಶದಲ್ಲಿರುವ ನೆಡುತೋಪುಗಳಲ್ಲಿ (ವನ್ಯಜೀವಿ ಮತ್ತು ಜಂಟಿ ಅರಣ್ಯ ಯೋಜನೆಗಳ ಪ್ರದೇಶಗಳನ್ನು ಹೊರತುಪಡಿಸಿ) ಲಭ್ಯವಿರುವ ಈ ಕೆಳಕಂಡ ಕಿರು ಅರಣ್ಯ ಉತ್ಪನ್ನಗಳ ಬಾಬನ್ನು 2005-07ನೇ ಸಾಲಿಗೆ ಕರಾರು ಒಪ್ಪಂದದ ದಿನಾಂಕದಿಂದ 30.6.2007ರ ವರೆಗೆ ಸಂಗ್ರಹಿಸಿ ಸಾಗಾಣಿಕೆ ಮಾಡುವ ಹಕ್ಕನ್ನು ಟೆಂಡರ್-ಕಂ-ಹರಾಜು ಮೂಲಕ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಕಛೇರಿಯಲ್ಲಿ ಈ ಕೆಳಕಂಡ ವೇಳೆಯಲ್ಲಿ ವಿಲೇವಾರಿ ಮಾಡಲಾಗುವುದು.

1. ಟೆಂಡರ್ ಸ್ವೀಕಾರದ ದಿನಾಂಕ: 23.6.2005 ರಂದು ಮಧ್ಯಾಹ್ನ 4.00 ಗಂಟೆಯವರೆಗೆ.
2. ಹರಾಜು ದಿನಾಂಕ: 23.6.2005 ರಂದು ಮಧ್ಯಾಹ್ನ 4.30 ಗಂಟೆಗೆ.

**ಷೆಡ್ಯೂಲ್**

| ಕ್ರ.ಸಂ. | ವಲಯ | ಅರಣ್ಯ ಉತ್ಪನ್ನ | ಯೂನಿಟ್ ಸಂಖ್ಯೆ |
|---|---|---|---|
| 1 | ಶಂಕರ | ಹುಣಸೆ ರಸ್ತೆ ಬದಿ ರಾಷ್ಟ್ರೀಯ ಹಾಗೂ ರಾಜ್ಯ ಹೆದ್ದಾರಿ | 1 |
| 2 | ಆಗುಂಬೆ | ಸಾಲುದೂಪ | 2 |
| | | ಮುರುಗನಹುಳಿ | 3 |
| | | ಎಂ.ಎಫ್.ಪಿ. ಹಾಲ್ಮಡ್ಡಿ | 4 |
| 3 | ಆಯನೂರು | ಎಂ.ಎಫ್.ಪಿ. ತೂಪ್ರಾಎಲೆ | 5 |
| 4 | ರಿಪ್ಪನ್‌ಪೇಟೆ | ಎಂ.ಎಫ್.ಪಿ. (12 ಉತ್ಪನ್ನಗಳು) | 6 |
| | | ತೂಪ್ರಎಲೆ | 7 |
| 5 | ತೀರ್ಥಹಳ್ಳಿ | ಎಂ.ಎಫ್.ಪಿ. ಹಾಲ್ಮಡ್ಡಿ | 8 |
| | | ತೂಪ್ರ ಎಲೆ | 9 |
| | | ಸಾಲುಧೂಪ | 10 |
| | | ದಾಲ್ಚಿನ್ನಿ | 11 |
| | | ಮುರುಗನಹುಳಿ | 12 |
| 6 | ಮಂಡಗದ್ದೆ | ಎಂ.ಎಫ್.ಪಿ. (ಸಾಲುಧೂಪ) | 13 |
| | | ವಾಟೆಹುಳಿ | 14 |
| | | ಮುರುಗನ ಹುಳಿ | 15 |

ಪಾವತಿಸಬೇಕಾಗಿರುವ ಇ.ಎಂ.ಡಿ. 2000-00 ರೂ.ಗಳು ಯೂನಿಟ್ ನಂ.1, 2, 3, 5, 7, 9, 10, 12, 14, 15 ಮತ್ತು ಯೂನಿಟ್ ನಂ.4, 6, 8, 11, 13ಕ್ಕೆ ರೂ. 3000=00 ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ.

ಪಿ.ಆರ್. 305 ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ-576101

## ಸಂಕ್ಷಿಪ್ತ ಟೆಂಡರು ಪ್ರಕಟಣೆ

**ಸಂಖ್ಯೆ: ಕಾನಿಇಂ:ಬಂಮೀವಿ:ಉಡುಪಿ:ಎಇ:ಟೆಂಡರು ಸೂಚನೆ:181:2004-05, ದಿನಾಂಕ: 27ನೇ ಮೇ 2005**

ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ಈ ಕೆಳಕಂಡ ಕಾಮಗಾರಿಗಾಗಿ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ, ಹೆಸರನ್ನು ನೋಂದಾಯಿಸಲಾದ ಅರ್ಹ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಗದಿತ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ದಿನಾಂಕ: 7.7.2005 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು. ಟೆಂಡರನ್ನು ಸಾಧ್ಯವಾದಲ್ಲಿ ಅದೇ ದಿನ 4.30 ಗಂಟೆಗೆ ತೆರೆಯಲಾಗುವುದು.

ನಿಬಂಧನೆಗಳೊಂದಿಗೆ ಟೆಂಡರನ್ನು ಒದಗಿಸಿದಲ್ಲಿ ತಿರಸ್ಕರಿಸಲಾಗುವುದು.

ಖಾಲಿ ಟೆಂಡರು ಫಾರಂಗಳಿಗಾಗಿ ಅರ್ಜಿಯನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಅದನ್ನು ಹಿಂತಿರುಗಿಸುವುದಿಲ್ಲ) ದಿನಾಂಕ: 29.6.2005 ರವರೆಗೆ ಕಛೇರಿ ಕೆಲಸದ ಎಲ್ಲಾ ದಿನಗಳಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಗುತ್ತಿಗೆದಾರರು ಅರ್ಜಿ ಫಾರಂನೊಂದಿಗೆ ರಿಜಿಸ್ಟ್ರೇಷನ್ ನವೀಕರಣ ಸರ್ಟಿಫೈಡ್ ಪ್ರತಿಯನ್ನು ಹಾಗೂ ರೂ.6.00 ಲಕ್ಷಕ್ಕೆ ಮೇಲ್ಪಟ್ಟ ಒಂದೇ ಕಟ್ಟಡ ಕಾಮಗಾರಿಯನ್ನು ನಿರ್ವಹಿಸಿದ ಅರ್ಹತೆ ಪತ್ರವನ್ನು ಲಗ್ತೀಕರಿಸಿರಬೇಕು, ಇಲ್ಲವಾದಲ್ಲಿ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲ.

ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 4.7.2005 ರಂದು ವಿತರಿಸಲಾಗುವುದು. ಹೆಚ್ಚಿನ ವಿವರಗಳನ್ನು ವಿಭಾಗೀಯ ಕಛೇರಿಯಲ್ಲಿ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರು ಅಂದಾಜು ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಅವಧಿ | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ | ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1) | ದ.ಕ. ಜಿಲ್ಲೆ ಮಂಗಳೂರು (ತಾ) ಮಂಗಳೂರು ಹಳೇ ಬಂದರು ಕಛೇರಿಗಾಗಿ ಹೊಸ ಆಡಳಿತ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿ | ರೂ.20.00 | ರೂ. 30000 | 12 ತಿಂಗಳು (ಮಳೆಗಾಲದ ಅವಧಿ ಹೊರತು ಪಡಿಸಿ) | ಐಟಂವಾರು | ರೂ.2500 + ತೆರಿಗೆ | II ನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆ:**

1. ಕಾಮಗಾರಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಸ್ವಂತ ಖರ್ಚಿನಿಂದ ಪೂರೈಸಿಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸಾಮಾಗ್ರಿಗಳ ಪ್ರಮಾಣ ಪತ್ರವನ್ನು ಒದಗಿಸುವುದು.
2. ಮೇಲೆ ತಿಳಿಸಿದ ದಿನಾಂಕಗಳಂದು ಸರ್ಕಾರಿ ರಜೆಗಳು ಬಂದರೆ ಅದರ ಮುಂದಿನ ದಿನಾಂಕವನ್ನು ಪರಿಗಣಿಸುವುದು.
3. ಇ.ಎಂ.ಡಿ. ಯನ್ನು ಡಿಮಾಂಡ್ ಡ್ರಾಫ್ಟ್, ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಶೆಡ್ಯೂಲ್ಡ್ ಬ್ಯಾಂಕಿನ ಇಲ್ಲವೆ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡಮಾಡಿದ ಬ್ಯಾಂಕರ್ಸ್ ಚೆಕ್ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು. ಇ.ಎಂ.ಡಿ. ಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ.
4. ಗುತ್ತಿಗೆದಾರರು ರೂ.6.00 ಲಕ್ಷಕ್ಕೆ ಮೇಲ್ಪಟ್ಟು (ಕಾಮಗಾರಿಯ ಮೊತ್ತದ ಶೇಕಡಾ 30 ಭಾಗದಷ್ಟು) ಇದೇ ರೀತಿಯ ಒಂದು ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕಳೆದ ಐದು ವರ್ಷಗಳಲ್ಲಿ ಒಂದೇ ಹಣಕಾಸು ವರ್ಷದ ಅವಧಿಯೊಳಗೆ ಮಾಡಿದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್ ರವರಿಂದ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಲಗ್ತೀಕರಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು.

**ಬಿ. ಗೋಪಾಲ ನಾಯ್ಕ**

ಪಿ.ಆರ್. 307 ಕಾಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಕಾ.ಅ:ಶಿ.ವಿ.ಶಿ:ಎ.ಇ 2/ಕಟ್ಟಡ/8/2005-06/630, ದಿನಾಂಕ: 25ನೇ ಮೇ 2005**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000ರ ಪ್ರಕಾರ ಆಕ್ಟ್ 2000ದ ನಿಯಮದಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್., ಸಿ.ಡಿ.ಆರ್, ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

### ನಿಬಂಧನೆಗಳು

1) ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ: ಪಿ.ಡಬ್ಲ್ಯೂ.ಡಿ. 344 ಸಿ.ಆರ್.ಎಂ. 2000 ದಿನಾಂಕ: 15.01.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.
2) ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲವೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.
3) ಟೆಂಡರ್ ಹಾಕಬಯಸುವ ಗುತ್ತಿಗೆದಾರರು ಎರಡು ಯಾಂತ್ರೀಕೃತ ಕಾಂಕ್ರೀಟ್ ಮಿಕ್ಸರ್. ಎರಡು ವೈಬ್ರೇಟರ್ (ಪಿನ್), ಒಂದು ಸ್ವಯಂಚಾಲಿತ ಲಿಫ್ಟ್, ಸೆಂಟರಿಂಗ್ ಮೆಟೀರಿಯಲ್ಸ್ ಹಾಗೂ ಕಟ್ಟಡ ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ದಾಖಲೆ ಒದಗಿಸತಕ್ಕದ್ದು.

4) ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ. ಕಾಮಗಾರಿಗಳಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
5) ಅರ್ಜಿದಾರರು ತಮ್ಮ ಗುತ್ತಿಗೆ ನೋಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಗುತ್ತಿಗೆದಾರರು ಒಂದು ವರ್ಷದವರೆಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
7) ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು (Line of Credit)

ಹೆಚ್ಚಿನ ವಿವರಗಳು ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಪಿ.ಆರ್. ಗಿರಿಯಪ್ಪ**

ಪಿ.ಆರ್. 311 ಕಾರ್ಯಪಾಲಕ ಅಭಿಯಂತರರು, ಲೋ.ಇ. ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಕರ್ನಾಟಕ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯಪಾಲಕ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ

## ಟೆಂಡರ್ ಮುಂದೂಡಿಕೆ ಪ್ರಕಟಣೆ

**ಸಂಖ್ಯೆ: ಕಾ.ಅ.:ಸನೀವಿ:ಶಿವಮೊಗ್ಗ:ಎಇ-2:1153/2005-06, ದಿನಾಂಕ: 24ನೇ ಮೇ 2005**

**ಉಲ್ಲೇಖ:** 1. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ: ಕಾ.ಅ:ಸನೀವಿ:ಶಿವಮೊಗ್ಗ:ಎಇ-2:04/04-05/196 ದಿನಾಂಕ: 03.2.2005.
2. ಟೆಂಡರ್ ತಿದ್ದುಪಡಿ ಪ್ರಕಟಣೆ ಸಂಖ್ಯೆ: ಕಾ.ಅ:ಸನೀವಿ:ಶಿವಮೊಗ್ಗ:ಎಇ-2:275/04-05, ದಿನಾಂಕ: 14.02.2005 ಹಾಗೂ ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: ಕಾ.ಅ:ಸನೀವಿ:ಶಿವಮೊಗ್ಗ:ಎಇ-2:669/04-05, ದಿನಾಂಕ: 22.03.2005 ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: ಕಾ.ಅ:ಸನೀವಿ:ಶಿವಮೊಗ್ಗ:ಎಇ-2:831/05-06, ದಿನಾಂಕ: 08.04.2005.
3. ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: ಕಾ.ಅ:ಸನೀವಿ:ಶಿವಮೊಗ್ಗ:ಎಇ-2:936/05-06, ದಿನಾಂಕ: 30.04.2005.

ಸೊರಬ ತಾಲ್ಲೂಕು, ಮೂಗೂರು ಗ್ರಾಮದ ಹತ್ತಿರ ವರದಾ ನದಿಗೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ (ನಬಾರ್ಡ್ ಅಡಿಯಲ್ಲಿ) ಕಾಮಗಾರಿಗೆ ಮೇಲಿನ ಉಲ್ಲೇಖ (1) ರಲ್ಲಿ ಟೆಂಡರ್ ಪ್ರಕಟಣೆ ಹೊರಡಿಸಿದ್ದು, ನಂತರ ಉಲ್ಲೇಖ (2) ಹಾಗೂ (3) ರಲ್ಲಿ ಟೆಂಡರ್ ಮುಂದೂಡಿಕೆ ಹಾಗೂ ತಿದ್ದುಪಡಿ ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಈಗ ಟೆಂಡರನ್ನು ಮರು ಮುಂದೂಡಲಾಗಿದ್ದು, ಆ ದಿನಾಂಕಗಳು ಈ ಕೆಳಗಿನಂತಿರುತ್ತದೆ. ಇನ್ನುಳಿದಂತೆ ಕಾಮಗಾರಿಗಳಲ್ಲಿ ಹಾಗೂ ಷರತ್ತುಗಳಿಗೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

| ಕ್ರ.ಸಂ. | ವಿವರಗಳು | ಮುಂದೂಡಲಾದ ದಿನಾಂಕ | ಮರು ಮುಂದೂಡಲಾದ ದಿನಾಂಕ |
|---|---|---|---|
| 1 | ಖಾಲಿ ಟೆಂಡರ್-ಫಾರಂಗಳನ್ನು ಕೊಡುವ ದಿನಾಂಕ | 25.04.2005ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು. | 15.06.2005ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು. |
| 2 | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ) | 31.05.2005ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸುವುದು. | 22.06.2005ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸುವುದು. |

ಪಿ.ಆರ್. 312 ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ.

## ತೋಟಗಾರಿಕೆ ಇಲಾಖೆ

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ಕೃಷ್ಣರಾಜಸಾಗರ, ಮಂಡ್ಯ ಜಿಲ್ಲೆ

## ಸಂಕ್ಷಿಪ್ತ ಟೆಂಡರ್ ಆಹ್ವಾನ ಪ್ರಕಟಣೆ

**ಸಂಖ್ಯೆ: ತೋಇ:ಹಿಸತೋನಿ:ಕೆಆರ್‌ಎಸ್:ವಿನಿ1:3:2005-06, ದಿನಾಂಕ: 24ನೇ ಮೇ 2005**

ಕೃಷ್ಣರಾಜ ಸಾಗರದ ಬೃಂದಾವನ ಉದ್ಯಾನಗಳ ಉಪಯೋಗಕ್ಕೆ ಕೊಟ್ಟಿಗೆ ಗೊಬ್ಬರ, ಕುದುರೆ ಗೊಬ್ಬರ, ಕೆಂಪುಮಣ್ಣು, ಮರಳು, ರಾಸಾಯನಿಕ ಗೊಬ್ಬರಗಳು, ಸಸ್ಯ ಸಂರಕ್ಷಣೆ ಔಷಧಿಗಳು, ತೋಟಗಾರಿಕೆ ಸಲಕರಣೆಗಳು, ಹುಲ್ಲುಹಾಸುಗಳ ಅಭಿವೃದ್ಧಿಗೆ ಸಂಬಂಧಿಸಿದ ಪರಿಕರಗಳು ಮತ್ತು ಅಲಂಕಾರಿಕ ಗಿಡಗಳನ್ನು ಸರಬರಾಜು ಮಾಡುವುದಕ್ಕೆ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಸವಿವರ ಟೆಂಡರ್ ಪ್ರಕಟಣೆಯಲ್ಲಿನ ಷರತ್ತುಗಳಿಗೆ ಒಪ್ಪಿದಲ್ಲಿ ಕೊಟ್ಟಿಗೆ ಗೊಬ್ಬರ, ಕುದುರೆ ಗೊಬ್ಬರ, ಕೆಂಪುಮಣ್ಣು, ಮರಳು ಮತ್ತು ಅಲಂಕಾರಿಕ ಗಿಡಗಳನ್ನು ಸರಬರಾಜು ಮಾಡಲು ನಿಗದಿತ ಟೆಂಡರ್ ಫಾರಂಗಳನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಕೃಷ್ಣರಾಜ ಸಾಗರ, ಮಂಡ್ಯ ಜಿಲ್ಲೆರವರ ಕಛೇರಿಯಿಂದ ದಿನಾಂಕ: 21.5.2005 ರಿಂದ 20.6.2005 ರವರೆಗೆ ರೂ.500=00 ದರದಲ್ಲಿ ಪಡೆಯಬಹುದು. ಕೊಟ್ಟಿಗೆ ಗೊಬ್ಬರ, ಕುದುರೆ ಗೊಬ್ಬರ, ಕೆಂಪುಮಣ್ಣು, ಮರಳು, ರಾಸಾಯನಿಕ ಗೊಬ್ಬರಗಳು, ಸಸ್ಯ ಸಂರಕ್ಷಣೆ ಔಷಧಿಗಳು ಮತ್ತು ಮಣ್ಣಿನ ಕುಂಡಗಳ ಸರಬರಾಜಿಗೆ ಟೆಂಡರ್ ಸಲ್ಲಿಸುವ ಸಮಯದಲ್ಲಿ ರೂ.54,000=00 ಮತ್ತು ಅಲಂಕಾರಿಕ ಗಿಡಗಳನ್ನು ಸರಬರಾಜು ಮಾಡಲು ರೂ.71,000=00 ಗಳ ಮೊತ್ತಕ್ಕೆ ಇ.ಎಂ.ಡಿ. ಯಾಗಿ ಬ್ಯಾಂಕ್ ಡ್ರಾಫ್ಟ್‌ಗಳನ್ನು ಭರ್ತಿ ಮಾಡಿದ ಟೆಂಡರ್‌ಗಳೊಂದಿಗೆ ಲಗತ್ತಿಸಿ ಮೊಹರು ಮಾಡಿದ ಲಕೋಟೆಗಳನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಕೃಷ್ಣರಾಜ ಸಾಗರ, ಮಂಡ್ಯ ಜಿಲ್ಲೆ ರವರ ಕಛೇರಿಗೆ ದಿನಾಂಕ: 20.6.2005 ರಂದು ಸಂಜೆ 5.00 ಗಂಟೆಯೊಳಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು 21.6.2005 ರಂದು ಬೆಳಿಗ್ಗೆ 11.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಕೃಷ್ಣರಾಜ ಸಾಗರ, ಮಂಡ್ಯ ಜಿಲ್ಲೆರವರ ಕಛೇರಿಯಲ್ಲಿ ತೆರೆಯಲಾಗುವುದು. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು, ಉದ್ಯಾನವನ, ತೋಟಗಳು ಮತ್ತು ಪುಷ್ಪಾಭಿವೃದ್ಧಿ ರವರ ಕಛೇರಿಯಿಂದ ಅಥವಾ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಕೃಷ್ಣರಾಜ ಸಾಗರ, ಬೃಂದಾವನ ಉದ್ಯಾನವನ ರವರಿಂದ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಪಿ.ಆರ್. 321 (ರಾಜ್ಯ ವಲಯ) ಕೃಷ್ಣರಾಜ ಸಾಗರ, ಮಂಡ್ಯ ಜಿಲ್ಲೆ.

**ಜಲಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆ**
**ಕಾಯನಿರ್ವಾಹಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೀದರ್**
**ಟೆಂಡರ್‌ಗಳಿಗೆ ಸಂಬಂಧಪಟ್ಟ ಸೂಚನೆ**
**ಸಂಖ್ಯೆ: ಸನೀವಿ:ಬೀದರ:ತಾಶಾ-5/ಟೆಂಡರ್/ತೆಗಂಪೂರ/ಉಜಳಂಬ/2005-06/1560, ದಿನಾಂಕ: 16ನೇ ಮೇ 2005**

**ಕಾಮಗಾರಿಯ ಹೆಸರು** 1) ಬೀದರ್ ಜಿಲ್ಲೆ ಔರಾದ ತಾಲ್ಲೂಕಿನ ತೆಗಂಪೂರ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆಯ ಆಧುನೀಕರಣ.
2) ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಉಜಳಂಬ ಗ್ರಾಮದ ಹತ್ತಿರ ಹೊಸ ಸಣ್ಣ ನೀರಾವರಿ ಕೆರೆ ನಿರ್ಮಾಣ.

**ಉಲ್ಲೇಖ:** 1) ಸನೀವಿ:ಬೀದರ:ತಾಶಾ-5:ತೆಗಂಪೂರ/ಟೆಂಡರ್/2005-06/1158, ದಿನಾಂಕ: 2.4.2005.
2) ಸನೀವಿ:ಬೀದರ:ತಾಶಾ-3:ಉಜಳಂಬ/ಟೆಂಡರ್/2005-06/1244, ದಿನಾಂಕ: 16.04.2005.
3) - ಅದೇ - /1312, ದಿನಾಂಕ: 21.04.2005.

ಮೇಲೆ ನಮೂದಿಸಲಾದ ಕಾಮಗಾರಿಗಳಿಗಾಗಿ ಉಲ್ಲೇಖ (1) ಮತ್ತು (2) ರಂತೆ ಪ್ರಕಟಿಸಲಾದ ಟೆಂಡರ್ ಅಧಿಸೂಚನೆಗಳನ್ನು ತಾಂತ್ರಿಕ ಕಾರಣಗಳಿಂದ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ.

ಎಲ್ಲಾ ಸಂಬಂಧಪಟ್ಟವರು ಗಮನಿಸಲು ಕೋರಲಾಗಿದೆ.

**ಗುಂಡಪ್ಪಾ ಚಿಲ್ಲಾಳೆ**
ಕಾರ್ಯನಿರ್ವಾಹಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಬೀದರ್

ಪಿ.ಆರ್. 308

**ಉಪ ನಿರ್ದೇಶಕರು (ತರಬೇತಿ) ರವರ ಕಛೇರಿ,**
**ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88**
**ಹರಾಜು ಇಸ್ತಿಹಾರ**
**ಸಂಖ್ಯೆ: ರಾಜಾಸಂತಕೇಂ:ಅ1:ಹರಾಜು:2005-06, ದಿನಾಂಕ: 30ನೇ ಮೇ 2005**

**ವಿಷಯ:** ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟದಲ್ಲಿರುವ ಒಂದು ವಾಹನವನ್ನು ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಸಾರಿಗೆ ಅಧಿಕಾರಿಯವರ ಪತ್ರ ಸಂಖ್ಯೆ: ಆರ್‌ಟಿಓ:ಬಿ.ಎನ್.ಜಿ:(ಎನ್) 02-03, ದಿನಾಂಕ: 16.12.2002.

ಈ ಮೂಲಕ ಸಾರ್ವಜನಿಕರಿಗೆ ಪ್ರಚಾರ ಪಡಿಸುವುದೇನೆಂದರೆ, ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88 ರಲ್ಲಿರುವ ಈ ಕೆಳಕಂಡ ವಾಹನವನ್ನು ದಿನಾಂಕ: 23.06.2005 ರಂದು ಬೆಳಿಗ್ಗೆ 12.00 ಗಂಟೆಗೆ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಅಂದೇ ಈ ಕೇಂದ್ರದಲ್ಲಿರುವ ಪಶು ಆಹಾರ ಗೊಬ್ಬರದ ಖಾಲಿ ಚೀಲಗಳನ್ನೂ ಸಹ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಾಹನದ ವಿವರ

| ಕ್ರ.ಸಂ. | ವಾಹನದ ನೋಂದಣಿ ಸಂಖ್ಯೆ | ಉತ್ಪಾದಿಸಿದ ವರ್ಷ | ವಾಹನದ ವಿಧ | ಇಂಧನ ಬಳಕೆ |
|---|---|---|---|---|
| 1 | ಎಂ.ವೈ.ಡಿ.6393 | 1965 | ಲಾರಿ | ಡೀಸೆಲ್ |

**ನಿಬಂಧನೆಗಳು:**

1) ಹರಾಜಿನಲ್ಲಿ ಭಾಗವಹಿಸತಕ್ಕವರು ಹರಾಜಿನ ಮೊದಲು ರೂ.1000-00 (ಒಂದು ಸಾವಿರ) ಗಳನ್ನು ಠೇವಣಿಯಾಗಿ ಇಡಬೇಕು ಈ ಹಣವನ್ನು ಹರಾಜು ಪೂರೈಸಿದ ನಂತರ ಹಿಂದಿರುಗಿಸಲಾಗುವುದು. (ಅಂಗೀಕರಿಸಿದ ಹರಾಜುದಾರರನ್ನು ಹೊರತುಪಡಿಸಿ)
2) ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್ಡನ್ನು ಮುನ್ಸೂಚನೆ ಇಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.
3) ಮೇಲಾಧಿಕಾರಿಯವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವುದು ಠೇವಣಿಯನ್ನು ತುಂಬಿದ ಹರಾಜುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
4) ಯಶಸ್ವಿ ಹರಾಜುದಾರರು ಹರಾಜಿನ ಪೂರ್ತಿ ಹಣವನ್ನು ತೆರಿಗೆ ಸಹಿತ ತಕ್ಷಣವೇ ಪಾವತಿ ಮಾಡಿ ರಶೀದಿ ಪಡೆಯತಕ್ಕದ್ದು ತಪ್ಪಿದ್ದಲ್ಲಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ನಷ್ಟದ ಮೊಬಲಗನ್ನು ಮೊದಲೇ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿ ಎಂದು ಪರಿಗಣಿಸಿ ವಸೂಲು ಮಾಡಲಾಗುವುದು ಲಾಭವೇನಾದರೂ ಬಂದರೆ ಅದಕ್ಕೆ ಅವರು ಅರ್ಹರಲ್ಲ.
5) ವಾಹನವು ಎಲ್ಲಿದೆಯೋ ಹೇಗಿದೆಯೋ ಹಾಗೇ ಈಗ ಇರುವ ಸ್ಥಳದಲ್ಲಿಯೇ ಹರಾಜು ಮಾಡಲಾಗುವುದು ಯಾವುದೇ ಕಾರಣಕ್ಕೂ ಸ್ಕ್ರ್ಯಾಪ್ (ಬಿಡಿಭಾಗ) ವೆಂದು ಪರಿಗಣಿಸಲಾಗುವುದಿಲ್ಲ.
6) ಇಚ್ಛೆಯುಳ್ಳ ಹರಾಜುದಾರರು ಹರಾಜು ಮಾಡಲ್ಲಿರುವ ನಿರುಪಯುಕ್ತ ವಾಹನವನ್ನು ಯಥಾಸ್ಥಿತಿಯಲ್ಲಿ ಉಪ ನಿರ್ದೇಶಕರು (ತರಬೇತಿ), ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88 ರವರ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.
7) ಹೆಚ್ಚಿನ ಮಾಹಿತಿಗಾಗಿ ಉಪ ನಿರ್ದೇಶಕರು (ತರಬೇತಿ) ರವರನ್ನು ಸಂಪರ್ಕಿಸಬಹುದು.

ಉಪ ನಿರ್ದೇಶಕರು (ತರಬೇತಿ)
ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88.

ಪಿ.ಆರ್. 309

**FORM-IV**
**(See Rule 12)**
**NOTICE**

It is hereby notified that the undersigned has changed his name from **M.J. BAJANTRI** to **M.J. MANE**

PD-64 **M.J. MANE**

**KARNATAKA STATE BOARD OF WAKFS**
**Darul Awkaf, No.6, Cunningham Road, Bangalore-52**
**CORRIGENDUM No. KTW/REG/6/BGT/2000-01, Dated: 22nd February 2005**

**Sub:** Correction of entries in respect of Araisi Masjid & Maddi Idgah (Sunni) & Dargah Jamkhandi Taluk, Bagalkot District.

**PREAMBLE:**

The Administrator, Dist. Wakf Advisory Committee, Bagalkote, vide his letter dated 30.04.2000 has reported that the institution viz., Araisi Masjid & Maddi Idgah (Sunni) & Dargah Jamkhandi Taluk, Bagalkot District, has been notified in the official Gazette at Sl.No.3 of Jamkhandi Taluk, vide notification No. KTW/ASR/73 dated: 20th September 1973 and reported that in CTS.No. Sy.No. measurement and boundaries etc. are not mentioned in the notification. Thus he had requested to correct the same as proposed. Accordingly a Public Notice of even No. 23.6.2000 was issued inviting objections/suggestions from the interested persons of the locality. The Chairman, Dist. Wakf Advisory Committee, Bagalkot vide his letter dated: 20.2.2002 has reported that objections/suggestions have not been received in response to the Public Notice dated: 23.6.2000. Hence, recommended to issue Corrigendum as proposed. Also objections/suggestions have not been received in the Board in this behalf. Hence, this Corrigendum.

| EXISTING ENTRIES | | | | READ THE CORRECT ENTRIES | | | |
|---|---|---|---|---|---|---|---|
| Sl. No. | Name of the wakf Sunni or Shia to be specified and located. | Description of Wakf properties and particulars thereof such Sy.No., House No. & Boundaries Village, Town. | Name of Mutha-valli | Sl. No. | Name of the wakf Sunni or Shia to be specified and located. | Description of Wakf properties and particulars thereof as such Sy.No., House No. & Boundaries Village, Town. | Name of Muthavalli |
| 1 | 2 | 3 | 4 | 1 | 2 | 3 | 4 |
| 3 | Arasi Masjid & Maddi Idgah (Sunni), Jam-khandi. | Open space & Houses & Clock. | Sri Husen Sab Shannu Saheb Jare President Momin Galli Jamkhandi | 3 | Arasi Masjid & Maddi Idgah & Dargah (Sunni) Momin Mohalla, Jam-khandi | 1. Masjid CTS. No.2655 MEASURING: 209.86 Sq.Mtrs. CTS.No.2656,65.22 SQ.Mtrs<br>BOUNDED BY<br>East: Lane thereafter Houses.<br>West: 3' Lane.<br>North: Lane & Private Houses.<br>South: Road.<br>2. Maddi Idgah & Dargah. Sy.No.25. A.290-360 Out of which Measuring 5A-38g as Idgah & Dargah<br>BOUNDARIES<br>East: Forest Area.<br>West: Forest Area & Road.<br>North: Forest Area & thereafter Road<br>South: Forest Area. | Chairman Arasi Masjid Maddi Idgah & Dargah (Sunni) Sunnath Jamaths Momin Mohalla, Jam-khandi. |

PD-69

Addl. Chief Executive Officer,
Karnataka State Board of Wakfs.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು**
**ಅರಣ್ಯ ಕಾಮಗಾರಿಗಳ ಟೆಂಡರ್**
**ಸಂಖ್ಯೆ: ಎ.ಅಕಾ./ಟೆಂಡರ್/ವಿವ.9/2005-06, ದಿನಾಂಕ: 2ನೇ ಜೂನ್ 2005**

ಈ ಮೂಲಕ ತಿಳಿಯಪಡಿಸುವುದೇನೆಂದರೆ 2005-06ನೇ ಸಾಲಿನಲ್ಲಿ ಬೇರಿ ಯೋಜನೆಯ ಟಿ.ಬಿ.ಎಫ್. ಯಡಿ ಫಲಾನುಭವಿಗಳ ಜಮೀನಿನಲ್ಲಿ ನೆಡಲು ಬೇಕಾದ ಕಸಿ ಮಾವಿನ ಮತ್ತು ಸಪೋಟ ಗಿಡಗಳನ್ನು ಸರಬರಾಜು ಮಾಡಲು ಈ ವಿಭಾಗದಲ್ಲಿ 2005-06ನೇ ಸಾಲಿಗೆ

ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಟೆಂಡರ್ ಕರೆಯಲಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 18.6.2005 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಸ್ವೀಕರಿಸುವರು.

| ಕ್ರ. ಸಂ. | ಕಛೇರಿಯ ಹೆಸರು | ಸಂಖ್ಯೆ ಮತ್ತು ಯೋಜನೆಯ ಹೆಸರು | ವಲಯ ಮತ್ತು ಕಾಮಗಾರಿ ವಿವರ | | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗದಿ ಪಡಿಸಿದ ಇಎಂಡಿ ಮೊತ್ತ (ರೂ.ಗಳಲ್ಲಿ) | ಭರ್ತಿ ಮಾಡಿದ ಟೆಂಡರ್‌ಗಳನ್ನು ಕಛೇರಿಯಲ್ಲಿ ಸ್ವೀಕರಿಸುವ ದಿನಾಂಕ | ಟೆಂಡರ್ ಸ್ವೀಕರಿಸುವ ಮತ್ತು ತೆರೆಯುವ ಅಧಿಕಾರಿಯ ಪದನಾಮ |
|---|---|---|---|---|---|---|---|---|
| 1 | 2 | 3 | 4 | | 5 | 6 | 7 | 8 |
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, (ಪ್ರಾದೇಶಿಕ) ವಿಭಾಗ, ತುಮಕೂರು. | ಎ-ಟೆಂಡರ್-ವಿವ.9/ 2005-06, ದಿನಾಂಕ: 02.6.2005 | ಬೇರಿ ಯೋಜನೆಯಡಿ ವಲಯ ವ್ಯಾಪ್ತಿಯಲ್ಲಿ ಬರುವ ಗ್ರಾಮ ಅರಣ್ಯ ಸಮಿತಿಗಳಿಗೆ ಕುಂಡ: ಪಾಲಿಥೀನ್ ಚೀಲಗಳಲ್ಲಿ ಬೆಳಸಿದ ಒಂದೂವರೆಯಿಂದ ಎರಡು ವರ್ಷದ 2 ರಿಂದ 3 ಅಡಿ ಎತ್ತರದ ಉತ್ತಮ ಕಸಿ ಮಾವಿನ ಮತ್ತು ಸಪೋಟ ಗಿಡಗಳನ್ನು ಸರಬರಾಜು ಮಾಡುವುದು. | | | | | |
| | | | ಮಧುಗಿರಿ | 4600 Nos | 161000 | 4025 | | |
| | | | ಕೊರಟಗೆರೆ | 7800 Nos | 273000 | 6825 | ದಿನಾಂಕ: | ಉಪ ಅರಣ್ಯ |
| | | | ತುಮಕೂರು | 8000 Nos | 280000 | 7000 | 18.06.05 ರಂದು | ಸಂರಕ್ಷಣಾಧಿಕಾರಿ |
| | | | ಗುಬ್ಬಿ | 5000 Nos | 175000 | 4375 | 3.00 | ತುಮಕೂರು ವಿಭಾಗ, |
| | | | ಶಿರಾ | 12800 Nos | 448000 | 11200 | ಗಂಟೆಯವರೆಗೆ | ತುಮಕೂರು. |
| | | | ಒಟ್ಟು | 38200 Nos | 1337000 | 33425 | | |

**ಷರತ್ತುಗಳು:**

1. ದರವನ್ನು ಪ್ರತಿ ಸಸಿಗೆ ಜಾತಿವಾರು ನಮೂದಿಸುವುದು
2. ಇಎಂಡಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಹೆಸರಿಗೆ ಡಿ.ಡಿ. ಮೂಲಕ ಪಾವತಿಸಬೇಕು
3. ಉತ್ತಮ ಗುಣಮಟ್ಟದ ಸಸಿಗಳನ್ನು ಸರಬರಾಜು ಮಾಡುವುದು
4. ಕಸಿ ಸಸಿಗಳ ಪ್ರಮಾಣ ಹೆಚ್ಚಾಗುವ ಅಥವಾ ಕಡಿಮೆಯಾಗುವ ಸಾಧ್ಯತೆಯಿದ್ದು ಹೆಚ್ಚುವರಿಯಾದ ಸಸಿಗಳ ಪ್ರಮಾಣವನ್ನು ಒಪ್ಪಿಗೆಯಾದ ಟೆಂಡರ್ ದರದಲ್ಲಿಯೇ ಸರಬರಾಜು ಮಾಡತಕ್ಕದ್ದು
5. ಸಸಿಗಳನ್ನು ವಲಯ ವ್ಯಾಪ್ತಿಯ ಗ್ರಾಮ ಅರಣ್ಯ ಸಮಿತಿಗಳಿಗೆ ಸರಬರಾಜು ಮಾಡಬೇಕಾಗಿದೆ. ಇದಕ್ಕಾಗಿ ಪ್ರತ್ಯೇಕವಾಗಿ ದರ ನೀಡುವುದಿಲ್ಲ
6. ಸಸಿಗಳ ಗುಣಮಟ್ಟ ಪರಿಶೀಲಿಸಿದ ನಂತರ ಹಣ ಪಾವತಿಸಲಾಗುವುದು
7. ಕಾಲಕಾಲಕ್ಕೆ ನಿಗದಿಪಡಿಸುವ ಆದಾಯ ತೆರಿಗೆ ಇತ್ಯಾದಿಗಳನ್ನು ಹಣ ಪಾವತಿಸುವ ಬಿಲ್‌ನಲ್ಲಿ ಕಟಾವು ಮಾಡಬೇಕಾಗುತ್ತದೆ
8. ಹೆಚ್ಚಿನ ಮಾಹಿತಿಯನ್ನು ಕಛೇರಿ ಕೆಲಸದ ವೇಳೆಯಲ್ಲಿ ವಿಭಾಗ ಕಛೇರಿಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ

ಪಿ.ಆರ್. 315	ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಧಾರವಾಡ ಜಿಲ್ಲೆ**

**ಮರು ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಇಎಕ್ಸ್‌ಇ:ಸಾ.ಬ.ಹ:01:2003-04, ದಿನಾಂಕ: 28ನೇ ಮೇ 2005**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಕುರಿತು.

ದಿನಾಂಕ: 26.03.2005ರ ಬಹಿರಂಗ ಹರಾಜಿನಲ್ಲಿ ವಿಲೇವಾರಿಯಾಗದೇ ಬಾಕಿ ಉಳಿದಿರುವ ಈ ಕೆಳಕಂಡ ವಾಹನಗಳನ್ನು ಎಲ್ಲಿವೆಯೋ ಹೇಗಿವೆಯೋ ಯಥಾ ಸ್ಥಿತಿಯಲ್ಲಿ ಕೆಳಗೆ ಸೂಚಿಸಿರುವ ಷರತ್ತುಗಳ ಪ್ರಕಾರ **ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ, ನವನಗರ ಇವರ ಕಛೇರಿ ಆವರಣದಲ್ಲಿ ದಿನಾಂಕ: 04.07.2005 ರಂದು ಬೆಳಿಗ್ಗೆ 11.00 ಗಂಟೆಗೆ** ಮರು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹರಾಜು ನಿರ್ವಹಣಾಧಿಕಾರಿಯನ್ನಾಗಿ ಅಬಕಾರಿ ಉಪ ಅಧೀಕ್ಷಕರು, ಧಾರವಾಡ ಉಪ ವಿಭಾಗ ಇವರನ್ನು ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ವಾಹನಗಳ ವಿಧ | ವಾಹನಗಳ ನೋಂದಣಿ ಸಂಖ್ಯೆ |
|---|---|---|
| 01 | ಟಾಟಾ ಮೊಬೈಲ್ | ಕೆಎ:29:ಎಂ:828 |
| 02 | ಟಾಟಾ ಸೀಯಾರಾ | ಕೆಎ:03:ಎಂ:6377 |
| 03 | ಕಾಂಟೆಸ್ಸಾ ಕಾರ್ | ಸಿಎವೈ:6626 |
| 04 | ಮಾರುತಿ ಒಮಿನಿ | ಕೆಎ:25:ಎಂ:1395 |
| 05 | ಮಾರುತಿ ವ್ಯಾನ್ | ಕೆಎ:25:ಎಂ:7599 |

| ಕ್ರಮ ಸಂಖ್ಯೆ | ವಾಹನಗಳ ವಿಧ | ವಾಹನಗಳ ನೋಂದಣಿ ಸಂಖ್ಯೆ |
|---|---|---|
| 06 | ಮಾರುತಿ ಓಮಿನಿ | ಜಿಎ:02:ಎ:9039 |
| 07 | ಮಾರುತಿ ವ್ಯಾನ್ | ಸಿಕೆಎಲ್:4853 |
| 08 | ಮಾರುತಿ 800 | ಎಂಎಫ್ಎ:5308 |
| 09 | ಫಿಯಟ್ ಕಾರ್ | ಎಂಜೆಜಿ:1625 |
| 10 | ಆಟೋ ರಿಕ್ಷಾ | ಕೆಎ:25:6917 |
| 11 | ಆಟೋ ರಿಕ್ಷಾ | ಕೆಎ:23:1122 |
| 12 | ಹೀರೋ ಹೊಂಡಾ | ಕೆಎ:25:ಕೆ:8742 |
| 13 | ಕೈನೆಟಿಕ್ ಹೊಂಡಾ | ಕೆಎ:25:ಇ:4859 |
| 14 | ಬಜಾಜ್ ಚೇತಕ್ ಸ್ಕೂಟರ್ | ಕೆಎ:25:ಇ:6024 |
| 15 | ಲಾರಿ | ಎಂಇಜಡ್:7430 |
| 16 | ಟ್ರಕ್ | ಸಿಟಿಡಬ್ಲ್ಯೂ:5052 |
| 17 | ಮಾರುತಿ ವ್ಯಾನ್ | ಕೆಎ:05:ಎಂಎ:5793 |
| 18 | ಗೂಡ್ಸ್ ಆಟೋ ರಿಕ್ಷಾ | ಕೆಎ:25:ಎ:4171-4172 |

ವಾಹನಗಳನ್ನು ನೋಡಬಯಸುವ ಸಾರ್ವಜನಿಕರು ಕಛೇರಿಯ ಸಮಯದಲ್ಲಿ ಮುಂಜಾನೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯೊಳಗಾಗಿ ನೋಡಬಹುದಾಗಿದೆ.

**ಷರತ್ತುಗಳು**

1. ಅಬಕಾರಿ ಇಲಾಖೆಯ ಸಿಬ್ಬಂದಿ ಹರಾಜಿನಲ್ಲಿ ಪ್ರತ್ಯಕ್ಷ ಯಾ ಪರೋಕ್ಷವಾಗಿಯಾಗಲಿ ಭಾಗವಹಿಸುವಂತಿಲ್ಲ.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸಾರ್ವಜನಿಕರು ಮೇಲ್ಕಾಣಿಸಿದ ದಿನದಂದು ಬೆಳಿಗ್ಗೆ 9.30 ರಿಂದ 11.00 ಗಂಟೆ ಒಳಗಾಗಿ ಲಾರಿಗೆ ರೂ.25,000 ಕಾರ್ : ರಿಕ್ಷಾಗಳಿಗೆ ರೂ.15,000 ಹಾಗೂ ದ್ವಿಚಕ್ರ ವಾಹನಗಳಿಗೆ ರೂ.2,000 ಗಳ ಮುಂಗಡ ಠೇವಣಿ ಇಟ್ಟು ರಶೀದಿ ಪಡೆಯತಕ್ಕದ್ದು.
3. ಯಶಸ್ವಿ ಸವಾಲುದಾರರ ಶೇಕಡಾ 25 ರಷ್ಟು ಹಣವನ್ನು ಹರಾಜಿನ ದಿನದಂದೆ ಪಾವತಿಸಿ ರಶೀದಿ ಪಡೆಯತಕ್ಕದ್ದು ಇನ್ನುಳಿದ ಶೇಕಡಾ 75 ರಷ್ಟು ಹಣವನ್ನು ಸ್ಥಿರೀಕರಣ ಆದೇಶ ತಲುಪಿದ 03 ದಿನಗಳೊಳಗಾಗಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ ಇವರು ಹೊಂದಿರುತ್ತಾರೆ.
4. ಯಶಸ್ವಿ ಸವಾಲುದಾರರು ಚಾಲ್ತಿಯಲ್ಲಿರುವ ದರದಲ್ಲಿ ಮಾರಾಟ ತೆರಿಗೆ ಹಾಗೂ ಇತರೆ ಕರಗಳನ್ನು ಪಾವತಿ ಮಾಡತಕ್ಕದ್ದು.
5. ಹರಾಜು ನಿರ್ವಹಣಾ ಅಧಿಕಾರಿಯ ನಿರ್ಣಯವೇ ಅಂತಿಮ ನಿರ್ಣಯ.
6. ಯಶಸ್ವಿ ಸವಾಲುದಾರರು ನೀಡಿರುವ ಸವಾಲನ್ನು ಸ್ಥಿರೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ ಇವರು ಹೊಂದಿರುತ್ತಾರೆ.

**ಎ.ಕೆ. ಕುಲಕರ್ಣಿ**

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಧಾರವಾಡ ಜಿಲ್ಲೆ

## ಮರು ಹರಾಜು ಪ್ರಕಟಣೆ

**ಸಂಖ್ಯೆ: ಇಎಕ್ಸ್ಇ:ಸಾ.ಬ.ಹ:01:2003-04, ದಿನಾಂಕ: 28ನೇ ಮೇ 2005**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಕುರಿತು.

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಕಂಡ ವಾಹನಗಳನ್ನು ಎಲ್ಲಿವೆಯೋ ಹೇಗಿವೆಯೋ ಯಥಾ ಸ್ಥಿತಿಯಲ್ಲಿ ಕೆಳಗೆ ಸೂಚಿಸಿರುವ ಷರತ್ತುಗಳ ಪ್ರಕಾರ **ಅಬಕಾರಿ ಇನ್ಸ್‌ಪೆಕ್ಟರ್, ಧಾರವಾಡ ವಲಯ ಇವರ ಕಛೇರಿ ಆವರಣದಲ್ಲಿ ದಿನಾಂಕ: 05.07.2005 ರಂದು ಬೆಳಗ್ಗೆ 11.00 ಗಂಟೆಗೆ** ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹರಾಜು ನಿರ್ವಹಣಾಧಿಕಾರಿಯನ್ನಾಗಿ ಅಬಕಾರಿ ಉಪ ಅಧೀಕ್ಷಕರು, ಧಾರವಾಡ ಉಪ ವಿಭಾಗ ಇವರನ್ನು ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ವಾಹನಗಳ ವಿಧ | ವಾಹನಗಳ ನೋಂದಣಿ ಸಂಖ್ಯೆ |
|---|---|---|
| 01 | ಟಾಟಾ ಲಾರಿ | ಸಿಟಿಡಬ್ಲ್ಯೂ:4958 |
| 02 | ಸುಜುಕಿ ಮ್ಯಾಕ್ಸ್ 100 | ಕೆಎ:25:ಕಿವ:2306 |

ವಾಹನಗಳನ್ನು ನೋಡಬಯಸುವ ಸಾರ್ವಜನಿಕರು ಕಛೇರಿಯ ಸಮಯದಲ್ಲಿ ಮುಂಜಾನೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯೊಳಗಾಗಿ ನೋಡಬಹುದಾಗಿದೆ.

**ಷರತ್ತುಗಳು**

1. ಅಬಕಾರಿ ಇಲಾಖೆಯ ಸಿಬ್ಬಂದಿ ಹರಾಜಿನಲ್ಲಿ ಪ್ರತ್ಯಕ್ಷ ಯಾ ಪರೋಕ್ಷವಾಗಿಯಾಗಲಿ ಭಾಗವಹಿಸುವಂತಿಲ್ಲ.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸಾರ್ವಜನಿಕರು ಮೇಲ್ಕಾಣಿಸಿದ ದಿನದಂದು ಬೆಳಿಗ್ಗೆ 11.00 ಗಂಟೆ ಒಳಗಾಗಿ ಲಾರಿಗೆ ರೂ.25,000 ಹಾಗೂ ದ್ವಿಚಕ್ರ ವಾಹನಗಳಿಗೆ ರೂ.2,000 ಗಳ ಮುಂಗಡ ಠೇವಣಿ ಇಟ್ಟು ರಶೀದಿ ಪಡೆಯತಕ್ಕದ್ದು.

3. ಯಶಸ್ವಿ ಸವಾಲುದಾರರ ಶೇಕಡಾ 25 ರಷ್ಟು ಹಣವನ್ನು ಹರಾಜಿನ ದಿನದಂದೆ ಪಾವತಿಸಿ ರಶೀದಿ ಪಡೆಯತಕ್ಕದ್ದು ಇನ್ನುಳಿದ ಶೇಕಡಾ 75 ರಷ್ಟು ಹಣವನ್ನು ಸ್ಥಿರೀಕರಣ ಆದೇಶ ತಲುಪಿದ 03 ದಿನಗಳೊಳಗಾಗಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ ಇವರು ಹೊಂದಿರುತ್ತಾರೆ.
4. ಯಶಸ್ವಿ ಸವಾಲುದಾರರು ಚಾಲ್ತಿಯಲ್ಲಿರುವ ದರದಲ್ಲಿ ಮಾರಾಟ ತೆರಿಗೆ ಹಾಗೂ ಇತರೆ ಕರಗಳನ್ನು ಪಾವತಿ ಮಾಡತಕ್ಕದ್ದು.
5. ಹರಾಜು ನಿರ್ವಹಣಾ ಅಧಿಕಾರಿಯ ನಿರ್ಣಯವೇ ಅಂತಿಮ ನಿರ್ಣಯ.
6. ಯಶಸ್ವಿ ಸವಾಲುದಾರರು ನೀಡಿರುವ ಸವಾಲನ್ನು ಸ್ಥಿರೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ ಇವರು ಹೊಂದಿರುತ್ತಾರೆ.

ಎ.ಕೆ. ಕುಲಕರ್ಣಿ

ಪಿ.ಆರ್. 313 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ.

**ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್ ರವರ ಕಛೇರಿ, ರಾಜ್ಯ ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು-1**

**ಅಧಿಸೂಚನೆ ಟೆಂಡರ್ ಮತ್ತು ಬಹಿರಂಗ ಹರಾಜು**

**ಸಂಖ್ಯೆ: ಎಸ್‌ಬಿಐ/ಎಂಟಿ-1/171/2005-06, ದಿನಾಂಕ: 28ನೇ ಮೇ 2005**

**ವಿಷಯ:** ರಾಜ್ಯ ಗುಪ್ತವಾರ್ತೆ ಘಟಕದಲ್ಲಿ ನಿರುಪಯುಕ್ತ ಮೋಟಾರು ವಾಹನಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ರಾಜ್ಯ ಗುಪ್ತವಾರ್ತೆ ಘಟಕ ಬೆಂಗಳೂರು ಕೇಂದ್ರ ಸ್ಥಾನದಲ್ಲಿರುವ 10 ವಾಹನಗಳನ್ನು ನಿರುಪಯುಕ್ತ ಗೊಳಿಸಿದೆ. ಅವುಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತದೆ. ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಛೇರಿ ಆವರಣದಲ್ಲಿ ದಿನಾಂಕ: 20.06.2005 ರಂದು ಬೆಳಿಗ್ಗೆ 12.00 ಘಂಟೆಗೆ ಹರಾಜು ಮಾಡುವ ಬಗ್ಗೆ ಸಾರ್ವಜನಿಕರಿಗೆ ತಿಳಿಯಪಡಿಸಲು ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

| ಕ್ರಮ ಸಂಖ್ಯೆ | ವಾಹನ ನೋಂದಣಿ ಸಂಖ್ಯೆ | ಮಾಡಲ್ | ಖರೀದಿಸಿದ ವರ್ಷ |
|---|---|---|---|
| 01 | ಕೆಎ-01ಜಿ-857 | ಪೆಟ್ರೋಲ್ ಕಾರು | 1992 |
| 02 | ಸಿಕೆಜಿ 361 | ಡೀಸೆಲ್ ಜೀಪು | 1986 |
| 03 | ಸಿಎಜಿ 17 | ಪೆಟ್ರೋಲ್ ಮೋಟಾರ್ ಸೈಕಲ್ | 1980 |
| 04 | ಸಿಎಜಿ 22 | ಪೆಟ್ರೋಲ್ ಮೋಟಾರ್ ಸೈಕಲ್ | 1980 |
| 05 | ಸಿಎಜಿ 23 | ಪೆಟ್ರೋಲ್ ಮೋಟಾರ್ ಸೈಕಲ್ | 1980 |
| 06 | ಎಂ.ಇಎ 9173 | ಪೆಟ್ರೋಲ್ ಮೋಟಾರ್ ಸೈಕಲ್ | 1975 |
| 07 | ಎಂಇಎ 9176 | ಪೆಟ್ರೋಲ್ ಮೋಟಾರ್ ಸೈಕಲ್ | 1975 |
| 08 | ಎಂಇಎ 9177 | ಪೆಟ್ರೋಲ್ ಮೋಟಾರ್ ಸೈಕಲ್ | 1975 |
| 09 | ಎಂಇಎನ್ 4930 | ಪೆಟ್ರೋಲ್ ಮೋಟಾರ್ ಸೈಕಲ್ | 1977 |
| 10 | ಎಂಇಎನ್ 628 | ಪೆಟ್ರೋಲ್ ಮೋಟಾರ್ ಸೈಕಲ್ | 1976 |

ಮೇಲ್ಕಂಡ ನಿರುಪಯುಕ್ತ ಮೋಟಾರು ವಾಹನಗಳನ್ನು ಸಾರ್ವಜನಿಕರ ವೀಕ್ಷಣೆ / ಪರಿಶೀಲನೆಗಾಗಿ ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಛೇರಿಯ ಆವರಣದಲ್ಲಿ ನಿಲ್ಲಿಸಿದ್ದು ಸಾರ್ವಜನಿಕರು ಎಲ್ಲಾ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಪರೀಕ್ಷಿಸಬಹುದು. ಟೆಂಡರ್ ಫಾರಂಗಳನ್ನು, ನಿಬಂಧನೆ ಮತ್ತು ಷರತ್ತುಗಳ ವಿವರಗಳನ್ನು ಈ ಕಛೇರಿಯ (ಎಂ.ಟಿ.ಓ.) ರವರಿಂದ/ ವಾಹನ ಶಾಖೆ ಅಧಿಕಾರಿ ಪಡೆಯಬಹುದು.

ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 18.06.2005 ರಂದು ಸಂಜೆ 5.00 ಘಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್ ರವರ ಪರವಾಗಿ,
ರಾಜ್ಯ ಗುಪ್ತವಾರ್ತೆ, ಬೆಂಗಳೂರು.

**ನಿಬಂಧನೆ ಮತ್ತು ಷರತ್ತುಗಳು**

1. ಮೋಟಾರು ವಾಹನಗಳ ಬಹಿರಂಗ ಹರಾಜನ್ನು ದಿನಾಂಕ: 20.06.2005 ರಂದು ಬೆಳಿಗ್ಗೆ 12.00 ಗಂಟೆಗೆ ಎ.ಡಿ.ಜಿ.ಪಿ., ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಛೇರಿಯ ಆವರಣದಲ್ಲಿ ನಡೆಸಲಾಗುವುದು.
2. ಮೋಟಾರು ವಾಹನಗಳನ್ನು ಎಲ್ಲಿ ಹೇಗಿದೆಯೋ (As is and where is basis) ಅದೇ ಪರಿಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3. ಟೆಂಡರ್ ಫಾರಂಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ಕಛೇರಿಯ ವಾಹನ ಶಾಖೆ (ಎಂ.ಟಿ.ಓ.) ಯಿಂದ ಪಡೆಯ ಬಹುದಾಗಿದೆ. ಫಾರಂಗಳಿಗಾಗಿ ಹಣವನ್ನು ಸಂದಾಯ ಮಾಡುವ ಅಗತ್ಯವಿಲ್ಲ.
4. ಟೆಂಡರ್ ಫಾರಂಗಳನ್ನು ದ್ವಿಪ್ರತಿಯಲ್ಲಿ ಸಲ್ಲಿಸಬೇಕು ಹಾಗೂ ಭರ್ತಿಮಾಡಿದ ಫಾರಂಗಳನ್ನು ಒಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು. ಮೊಹರು ಮಾಡಿದ ಲಕೋಟೆಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ಹೆಸರಿನಲ್ಲಿ ಸಲ್ಲಿಸಬೇಕು ಮತ್ತು ಲಕೋಟೆಗಳ ಮೇಲೆ ಮೋಟಾರು ವಾಹನಗಳನ್ನು ಖರೀದಿಸುವುದಕ್ಕಾಗಿ ಟೆಂಡರ್ ಫಾರಂ ಎಂದು ನಮೂದಿಸಿರಬೇಕು.
5. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಅರ್ನೆಸ್ಟ್‌ಮನಿ (ಇಎಂಡಿ) ಠೇವಣಿಯೊಂದಿಗೆ (ಡಿಮ್ಯಾಂಡ್ ಡ್ರಾಫ್ಟ್‌ನ್ನು ಮಾತ್ರ ಸಲ್ಲಿಸಬೇಕು). ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು ಮತ್ತು ಲಕೋಟೆಯನ್ನು ಎಂ.ಟಿ.ಓ. ಗುಪ್ತವಾರ್ತೆ ಬೆಂಗಳೂರು ರವರಿಗೆ ಸಲ್ಲಿಸಿ ಸ್ವೀಕೃತಿಯನ್ನು ಪಡೆಯಬಹುದು.
6. ಟೆಂಡರ್ ಫಾರಂಗಳಲ್ಲಿ ಮೋಟಾರು ವಾಹನಗಳಿಗೆ ನಮೂದಿಸಲಾಗುವ ಮೊತ್ತವನ್ನು ಸಂಖ್ಯೆ ಮತ್ತು ಪದಗಳೆರಡರಲ್ಲಿಯೂ ಸ್ಪಷ್ಟವಾಗಿ ಬರೆಯಬೇಕು.

7. ಟೆಂಡರ್ ಫಾರಂಗಳನ್ನು ವರ್ಗಾಯಿಸಬಾರದು ಹಾಗೂ ಎಲ್ಲಾ ವಾಹನಗಳಿಗೆ ಒಂದೇ ಟೆಂಡರ್ ಫಾರಂನ್ನು ಉಪಯೋಗಿಸಬಹುದು. (ಒಂದು ವಾಹನಕ್ಕೆ ರೂ.500.00 ರಂತೆ ಇ.ಎಂ.ಡಿ. ಸಲ್ಲಿಸಬೇಕು).
8. ಪ್ರತಿ ಟೆಂಡರ್ ಫಾರಂನೊಂದಿಗೆ 500.00 ರೂ.ಗಳ (ರೂ.ಐದು ನೂರು ಮಾತ್ರ) ಅರ್ನೆಸ್ಟ್ ಮನಿ ಡಿಪಾಸಿಟನ್ನು ಸಲ್ಲಿಸಿರಬೇಕು. ಅರ್ನೆಸ್ಟ್ ಮನಿ ಡಿಪಾಸಿಟ್‌ನ (ಇಎಂಡಿ) ಮೊತ್ತ ರೂ.500.00 ಗಳನ್ನು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಗುಪ್ತವಾರ್ತೆ, ಬೆಂಗಳೂರು ರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆಯಲಾದ ಡಿಮ್ಯಾಂಡ್ ಡ್ರಾಫ್ಟ್‌ನ (ಡಿ.ಡಿ.) ಮೂಲಕ ಮಾತ್ರ ಸಲ್ಲಿಸಬೇಕು. ಅರ್ನೆಸ್ಟ್ ಡಿಪಾಸಿಟ್ ಮೊತ್ತವನ್ನು ನಗದು ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ ಮತ್ತು ಡಿಪಾಸಿಟ್ ಇಲ್ಲದೆ ಸಲ್ಲಿಸಲಾದ ಟೆಂಡರ್ ಫಾರಂನ್ನು ತಿರಸ್ಕರಿಸಲಾಗುವುದು. ಅರ್ನೆಸ್ಟ್‌ಮನಿ ಡಿಪಾಸಿಟ್ ಮೊತ್ತಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ.
9. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 18.06.2005 ರಂದು ಸಂಜೆ 5.00 ಗಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. ದಿನಾಂಕ: 18.06.2005ರ ನಂತರ ಸ್ವೀಕರಿಸಲಾದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
10. 500.00 ರೂ.ಗಳ ಅರ್ನೆಸ್ಟ್ ಡಿಪಾಸಿಟ್‌ನೊಂದಿಗೆ ಟೆಂಡರ್ ಫಾರಂಗಳನ್ನು ಸಲ್ಲಿಸಿರುವವರಿಗೂ ಸಹ ದಿನಾಂಕ: 20.06.2005 ರಂದು ಬೆಳಿಗ್ಗೆ 12.00 ಗಂಟೆಗೆ ನಡೆಸಲಾಗುವ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ. ಹೀಗೆ ಹರಾಜಿನಲ್ಲಿ ಭಾಗವಹಿಸುವುದಕ್ಕಾಗಿ ಇವರು ಪುನಃ ಅರ್ನೆಸ್ಟ್ ಡಿಪಾಸಿಟನ್ನು (ಇಎಂಡಿ) ಕೊಡಬೇಕಿಲ್ಲ.
11. ಮೋಟಾರು ವಾಹನಗಳ ಸಂಖ್ಯೆ ಮತ್ತು ಬೆಲೆಯನ್ನು ಪದಗಳಲ್ಲಿ ಸ್ಪಷ್ಟವಾಗಿ ನಮೂದಿಸದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ನಲ್ಲಿ ನಮೂದಿಸಲಾಗುವ ಮೊತ್ತದಲ್ಲಿ ಯಾವುದೇ ತಿದ್ದುಪಡಿ ಇದ್ದಲ್ಲಿ ಅದನ್ನು ಟೆಂಡರ್ ಫಾರಂನ್ನು ಸಲ್ಲಿಸುವವರು ಪೂರ್ಣ ಸಹಿ ಮಾಡಿ ದೃಢೀಕರಿಸಿರಬೇಕು.
12. ಸಾರ್ವಜನಿಕ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ದಿನಾಂಕ: 20.06.2005ರ ಬೆಳಿಗ್ಗೆ 10.30 ಗಂಟೆಯೊಳಗಾಗಿ 500.00 ರೂ.ಗಳ ನಗದು ಠೇವಣಿಯನ್ನು ಕಛೇರಿಯ ನಗದು ಶಾಖೆಯಲ್ಲಿ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. 500.00 ರೂ.ಗಳ ಠೇವಣಿಯನ್ನು ಪಾವತಿ ಮಾಡದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಹರಾಜಿನಲ್ಲಿ ಯಶಸ್ವಿಯಾಗದವರಿಗೆ ಠೇವಣಿ ಹಣ 500.00 ರೂ.ಗಳನ್ನು ಕೂಡಲೇ ವಾಪಸ್ ಕೊಡಲಾಗುವುದು. ಹರಾಜಿನಲ್ಲಿ ಯಶಸ್ವಿಯಾದವರಿಗೆ ಠೇವಣಿ ಹಣವನ್ನು ಕೂಡಲೇ ವಾಪಸ್ ಕೊಡಲಾಗುವುದಿಲ್ಲ.
13. ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ಮೇಲು ಉಸ್ತುವಾರಿಯಲ್ಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ದಿನಾಂಕ: 20.06.2005 ರಂದು ಹರಾಜನ್ನು ನಡೆಸುವರು ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಮೋಟಾರು ವಾಹನಗಳಿಗೆ ತಮ್ಮ ಬೆಲೆಯನ್ನು ಕೂಗಬಹುದಾಗಿದೆ.
14. ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು, ಹರಾಜಿನ ನಂತರ ಮೊಹರಾದ ಟೆಂಡರ್‌ಗಳನ್ನು ಬಿಡ್‌ದಾರರ ಅಥವಾ ಅವರ ಏಜೆಂಟರ್‌ರವರು ಯಾರು ಹಾಜರಿರುತ್ತಾರೋ ಅವರ ಸಮ್ಮುಖದಲ್ಲಿ ಅದೇ ದಿನದಂದು ಒಡೆಯುವರು. ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಯಾವುದರಲ್ಲಿ ಹೆಚ್ಚಿನ ಮೊತ್ತ ದೊರಕುವುದೋ ಅಂತಹ ಟೆಂಡರ್ / ಹರಾಜನ್ನು ಪರಿಗಣಿಸಲಾಗುವುದು ಮತ್ತು ಸ್ವೀಕರಿಸಲಾಗುವುದು.
15. ಯಶಸ್ವಿಯಾದ ಬಿಡ್ಡುದಾರರು ಅಥವಾ ಟೆಂಡರ್‌ದಾರರು ಒಟ್ಟು ಮೊತ್ತದಲ್ಲಿ ಶೇಕಡ 25 ರಷ್ಟು ಮೊತ್ತವನ್ನು ಕೂಡಲೇ ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರು ರವರ ಕಛೇರಿಯ ಲೆಕ್ಕ ಶಾಖೆಯಲ್ಲಿ ನಗದು ಹಣವನ್ನು ಪಾವತಿ ಮಾಡತಕ್ಕದ್ದು. ದೃಢೀಕರಣ ಪತ್ರ ಬಿಡ್ಡುದಾರರಿಗೆ : ಟೆಂಡರ್‌ದಾರರಿಗೆ ತಲುಪಿದ 8 ದಿನಗಳೊಳಗಾಗಿ ಬಾಕಿ ಶೇಕಡ 75 ರಷ್ಟು ಮೊತ್ತ ಮತ್ತು ತೆರಿಗೆ ಹಣವನ್ನು ಪಾವತಿ ಮಾಡತಕ್ಕದ್ದು ಹಾಗೂ ಮೋಟಾರು ವಾಹನಗಳನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಬಿಡ್ಡಿನ/ಟೆಂಡರಿನ ಪೂರ್ತಿ ಮೊತ್ತವನ್ನು ಪಾವತಿ ಮಾಡಿ ಹಣವನ್ನು ತೆಗೆದುಕೊಳ್ಳದಿದ್ದಲ್ಲಿ ಬಿಡ್ಡುದಾರರ/ಟೆಂಡರುದಾರರ ಬಿಡ್ಡನ್ನು ರದ್ದುಗೊಳಿಸಲಾಗುವುದು ಹಾಗೂ ಮೋಟಾರು ವಾಹನಗಳನ್ನು ಮಾರಾಟ ಮಾಡುವುದಕ್ಕೆ ಪ್ರತ್ಯೇಕವಾಗಿ ಕ್ರಮವನ್ನು ತೆಗೆದುಕೊಳ್ಳಲಾಗುವುದು. ಹಣವನ್ನು ಪಾವತಿ ಮಾಡುವುದಕ್ಕೆ ಸಂಬಂಧಿಸಿದಂತೆ ಹುಂಡಿಗಳನ್ನು ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸ್ವೀಕರಿಸಲಾಗುವುದಿಲ್ಲ.
16. ಎಲ್ಲಾ ನಗದು ಪಾವತಿಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ ಬೆಂಗಳೂರು ರವರ ಕಛೇರಿಯ ಲೆಕ್ಕ ಶಾಖೆಯಲ್ಲಿ ಮಾತ್ರ ಮಾಡತಕ್ಕದ್ದು.
17. ಟೆಂಡರ್‌ದಾರರು : ಬಿಡ್ಡುದಾರರು ಪಾವತಿ ಮಾಡಿರುವ ಅರ್ನೆಸ್ಟ್‌ಮನಿ ಠೇವಣಿ ಹಣವನ್ನು ಮೋಟಾರು ವಾಹನದ ಬಾಕಿ ಇರುವ ಶೇಕಡ 75 ರಷ್ಟು ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದಿಲ್ಲ. ಬಿಡ್ಡುದಾರರು ಎಲ್ಲಾ ನಿಬಂಧನೆ ಮತ್ತು ಷರತ್ತುಗಳನ್ನು ಪೂರೈಸಿ ಮೋಟಾರು ವಾಹನಗಳನ್ನು ತಮ್ಮ ವಶಕ್ಕೆ ಪಡೆದ ನಂತರ ಈ ಅರ್ನಸ್ಟ್ ಠೇವಣಿ ಮೊತ್ತ 500.00 ಗಳನ್ನು ಲೆಕ್ಕ ಶಾಖೆಯಿಂದ ವಾಪಸ್ ಪಡೆಯಬಹುದಾಗಿದೆ.
18. ಯಶಸ್ವಿ ಬಿಡ್ಡುದಾರರು ನಿಗದಿತ ಅವಧಿಯಲ್ಲಿ ಹಣವನ್ನು ಪಾವತಿ ಮಾಡದಿದ್ದಲ್ಲಿ ಅಥವಾ ಈ ಇಲಾಖೆಗೆ ಯಾವುದೇ ರೀತಿಯ ನಷ್ಟ ಉಂಟು ಮಾಡಿದ್ದಲ್ಲಿ ನಷ್ಟದ ಮೊತ್ತವನ್ನು ಅರ್ನೆಸ್ಟ್ ಮನಿ ಡಿಪಾಸಿಟ್ ಹಾಗೂ ಪಾವತಿ ಮಾಡಲಾದ ಬಿಡ್ಡಿನ ಶೇಕಡ 25 ರಷ್ಟು ಮೊತ್ತದಿಂದ ವಸೂಲಿ ಮಾಡಲಾಗುವುದು. ಅಥವಾ ಡಿಪಾಸಿಟ್ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಕಾನೂನಿನ ಕ್ರಮವನ್ನು ಸಹ ಜರುಗಿಸಲಾಗುವುದು.
19. ಮಾರಾಟ ತೆರಿಗೆ ಮತ್ತು ಇತರೆ ಛಾರ್ಜ್‌ಗಳನ್ನು ಮಾರಾಟದ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ (ಬಿಡ್ಡಿನ ಅಥವಾ ಹರಾಜಿನ ಮೊತ್ತಕ್ಕೆ) ವಿಧಿಸಲಾಗುವುದು.
20. ಯಶಸ್ವಿ ಬಿಡ್ಡುದಾರರು/ಟೆಂಡರ್‌ದಾರರು ತಮ್ಮ ಸ್ವಂತ ವೆಚ್ಚದಿಂದ ಮೋಟಾರು ವಾಹನಗಳ ಸಾಗಾಣಿಕೆಗಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.
21. ಎ.ಡಿ.ಜಿ.ಪಿ. ಗುಪ್ತವಾರ್ತೆ ಬೆಂಗಳೂರುರವರು ಯಾವುದೇ ಕಾರಣವನ್ನು ನೀಡದೇ ಟೆಂಡರ್/ಹರಾಜನ್ನು ಸ್ವೀಕರಿಸುವ, ತಿರಸ್ಕರಿಸುವ ಮುಂದೂಡುವ ಅಥವಾ ರದ್ದುಪಡಿಸುವ ಹಕ್ಕನ್ನು ಹೊಂದಿರುತ್ತಾರೆ. ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ತೀರ್ಮಾನವೇ ಅಂತಿಮವಾಗಿರುತ್ತದೆ. ಮತ್ತು ಅವರ ತೀರ್ಮಾನಕ್ಕೆ ಎಲ್ಲರೂ ಬದ್ಧರಾಗಬೇಕಾಗುತ್ತದೆ.
22. ಈ ಮೋಟಾರು ವಾಹನಗಳ ಮಾರಾಟದ ಒಪ್ಪಂದದಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಕರ್ನಾಟಕ ರಾಜ್ಯ, ಬೆಂಗಳೂರುರವರ ನಿರ್ಣಯ ಅಂತಿಮವಾಗಿದೆ.

23. ಮಾರಾಟ ಮಾಡಲಾಗುವ ಮೋಟಾರು ವಾಹನಗಳನ್ನು ಎ.ಡಿ.ಜಿ.ಪಿ. ಗುಪ್ತವಾರ್ತೆ, ಬೆಂಗಳೂರುರವರ ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದ್ದು, ಎಲ್ಲಾ ಕೆಲಸದ ದಿನಗಳಂದು ಕಛೇರಿಯ ವೇಳೆಯಲ್ಲಿ ವಾಹನಗಳನ್ನು ಸಾರ್ವಜನಿಕರು ಪರೀಕ್ಷಿಸಬಹುದಾಗಿದೆ.

24. ಈ ಸಂಬಂಧದಲ್ಲಿ ಹೆಚ್ಚಿನ ಮಾಹಿತಿಯನ್ನು ಎಂ.ಟಿ.ಓ. ಗುಪ್ತವಾರ್ತೆ, ಬೆಂಗಳೂರು ರವರಿಂದ ಪಡೆಯಬಹುದಾಗಿದೆ.

ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್ ರವರ ಪರವಾಗಿ,

ಪಿ.ಆರ್. 310 ರಾಜ್ಯ ಗುಪ್ತವಾರ್ತೆ, ಬೆಂಗಳೂರು.

## ಕಮಾಂಡೆಂಟ್ ರವರ ಕಛೇರಿ,
## ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಶಿವಮೊಗ್ಗ-577222.
## ಟೆಂಡರ್ ಕಮ್-ಬಹಿರಂಗ ಹರಾಜು
## ಸಂಖ್ಯೆ: 48ಎ:ವಾವಿ/2005-06 ದಿನಾಂಕ: 26ನೇ ಮೇ 2005

**ವಿಷಯ :** ಈ ಘಟಕದ ವಾಹನ ಸಾರಿಗೆ ವಿಭಾಗದಲ್ಲಿರುವ 04 ಸಂಖ್ಯೆಯ ಅನುಪಯುಕ್ತ ಹಳೆಯ ವಾಹನಗಳನ್ನು ಟೆಂಡರ್ ಕಂ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** ಮಾನ್ಯ ಡಿ. ಜಿ. ಮತ್ತು ಐ.ಜಿ.ಪಿ. ಕ. ರಾಜ್ಯ, ಬೆಂಗಳೂರು ರವರ ಪತ್ರ ಸಂಖ್ಯೆ: ವಾಸಾ (1)89/2004-05 ದಿನಾಂಕ: 14.05.2005.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಹೆಸರಿಸಿರುವ 04 ಸಂಖ್ಯೆಯ ವಿವಿಧ ರೀತಿಯ ಹಳೆಯ ಪೊಲೀಸ್ ವಾಹನಗಳನ್ನು ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಮಾಚೇನಹಳ್ಳಿ, ಶಿವಮೊಗ್ಗ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ **ದಿನಾಂಕ: 23.06.2005** ರಂದು ಬೆಳಿಗ್ಗೆ 10.00 ಗಂಟೆಗೆ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.

**ವಾಹನಗಳ ವಿವರ**

| ಕ್ರ.ಸಂ. | ವಾಹನದ ನೋಂದಣಿ ಸಂಖ್ಯೆ | ಮಾದರಿ | ತಯಾರಿಕೆ ವರ್ಷ | ಷರಾ |
|---|---|---|---|---|
| 1. | ಕೆಎ-14 ಜಿ-242 | ಮಹೀಂದ್ರಕಮಾಂಡರ್ ಜೀಪ್ | 1993 | |
| 2. | ಸಿಕೆಜಿ-1129 | ಟಾಟಾ 807 ಓಮಿನಿ ಬಸ್ | 1986 | |
| 3. | ಸಿಕೆಜಿ-938 | ಟಾಟಾ 807 ಓಮಿನಿ ಬಸ್ | 1986 | |
| 4. | ಸಿಕೆಜಿ-940 | ಟಾಟಾ 807 ಓಮಿನಿ ಬಸ್ | 1986 | |

ಮೇಲೆ ನಮೂದಿಸಿರುವ ಅನುಪಯುಕ್ತ ವಾಹನಗಳನ್ನು ಈ ಕೆಳಗಿನ ಷರತ್ತುಗಳೊಂದಿಗೆ ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1. ಮೊಹರು ಮಾಡಿದ ಟೆಂಡರನ್ನು ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ಇವರಿಗೆ ಅನುಪಯುಕ್ತ ವಾಹನಗಳ ಖರೀದಿಗಾಗಿ ಟೆಂಡರ್ ಎಂದು ಲಕೋಟೆಯ ಮೇಲೆ ಬರೆದು ಕಳಿಸುವುದು.
2. ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಬರೆಯತಕ್ಕದ್ದು.
3. ಹರಾಜಿನಲ್ಲಿ ಭಾಗವಹಿಸುವವರು ರೂ. 5,000-00 (ರೂ. ಐದು ಸಾವಿರ ಮಾತ್ರ) ಗಳನ್ನು ಹರಾಜಿಗೆ ಮೊದಲೇ ಠೇವಣಿಯಾಗಿ ಕಮಾಂಡೆಂಟ್‌ರು, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ರವರಲ್ಲಿ ಠೇವಣಿ ಇಡತಕ್ಕದ್ದು.
4. ಪ್ರತಿ ವಾಹನಗಳ ಗುಣವನ್ನು ಅತೀ ಹೆಚ್ಚಿನ ಮೌಲ್ಯಕ್ಕೆ ಸೂಚಿಸಿದ ಠೇವಣಿದಾರರಿಗೆ ಬಿಡಲಾಗುವುದು.
5. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 23.06.2005 ರಂದು ಬೆಳಿಗ್ಗೆ 10.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ. ಠೇವಣಿಯನ್ನು ತುಂಬಿದ ಟೆಂಡರ್‌ದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
6. ಯಶಸ್ವಿಯಾದ ಟೆಂಡರ್ ಸವಾಲುದಾರರು ಅನುಪಯುಕ್ತ ವಾಹನಗಳ ಒಟ್ಟು ಬೆಲೆಯ ಶೇಕಡ 25% ರಷ್ಟು ಹಣವನ್ನು (ಠೇವಣಿ ಸೇರಿ) ಸ್ಥಳದಲ್ಲಿಯೇ ನಗದು ರೂಪದಲ್ಲಿ ತುಂಬಬೇಕು. ಸದರಿ ಹರಾಜನ್ನು ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ/142/ಶಿವಾನಿ/2000 ಬೆಂಗಳೂರು ದಿನಾಂಕ: 05.01.2001 ರಲ್ಲಿ ರಚಿತವಾಗಿರುವ ಸಮಿತಿಯವರು ದೃಢೀಕರಿಸಿದ ನಂತರವೇ ಉಳಿದ ಶೇಕಡಾ 75% ರಷ್ಟು ಮೊತ್ತ ತೆರಿಗೆ, ಸೆಸ್, ಇತರೆಯನ್ನು ಡಿ.ಡಿ. ಮುಖಾಂತರ ಪಾವತಿ ಮಾಡಿ ಯಶಸ್ವಿಯಾದವರು 15 (ಹದಿನೈದು) ದಿವಸಗಳೊಳಗಾಗಿ ತಮ್ಮ ಸ್ವಂತ ಖರ್ಚಿನಿಂದ ಸದರಿ ವಾಹನಗಳನ್ನು ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25% ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್ ಸವಾಲುದಾರರ ಠೇವಣಿ ಹಣವನ್ನು ಮತ್ತು ಡಿ.ಡಿ. ಯನ್ನು ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು.
8. ಮೇಲೆ ತಿಳಿಸಿರುವ ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕಮಾಂಡೆಂಟ್ ರವರು ಹೊಂದಿರುತ್ತಾರೆ. ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಮಾನ್ಯ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಕರ್ನಾಟಕ ರಾಜ್ಯ, ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
9. ಇಚ್ಛೆಯುಳ್ಳ ಟೆಂಡರ್ ಸವಾಲುದಾರರು ಹರಾಜು ಮಾಡಲಿರುವ ಅನುಪಯುಕ್ತ (ಯಥಾಸ್ಥಿತಿಯಲ್ಲಿರುವ) ವಾಹನಗಳ ವಿವರಗಳನ್ನು ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ವಾಹನ ಸಾರಿಗೆ ವಿಭಾಗದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.
10. ಸರ್ಕಾರದ ವಾಹನಗಳ ಹರಾಜಿನಲ್ಲಿ ಭಾಗೀದಾರರಾಗುವ ಎಲ್ಲರೂ ಸರ್ಕಾರಿ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.

ಕಮಾಂಡೆಂಟ್,

ಪಿ.ಆರ್. 316 ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಶಿವಮೊಗ್ಗ.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯಪಾಲಕ ಇಂಜನೀಯರ್ ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ (ಎರಡು ಲಕೋಟೆ ಪದ್ಧತಿ)**
**ಸಂಖ್ಯೆ: ಸನೀವಿ/ಕು/ಪಿಬಿ/ಮುದ್ದಾಪೂರ/2005-06/791, ದಿನಾಂಕ: 24ನೇ ಮೇ 2005**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿದ ಮೊದಲನೆ ದರ್ಜೆ ಗುತ್ತಿಗೆದಾರರಿಂದ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರಿಂದ ಎರಡು ಲಕೋಟೆ ಅಂದರೆ ತಾಂತ್ರಿಕ ಮತ್ತು ಆರ್ಥಿಕ ಬಿಡ್ ಪದ್ಧತಿಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಕಾಮಗಾರಿಯ ವಿವರ ಈ ಕೆಳಗೆ ತೋರಿಸಿದ ನಮೂನೆಯಲ್ಲಿ ಇರುತ್ತದೆ.

ಗುತ್ತಿಗೆದಾರರು ಅಂದರೆ ವೈಯಕ್ತಿಕ/ಫರ್ಮ/ಸಂಯುಕ್ತವಾಗಿ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು/ಫರ್ಮ ಅಥವಾ ಎರಡೂ ಹೊಂದಿರುವ ಪ್ರಮುಖ ಪಾಲುದಾರರು. ಖಾಲಿ ತಾಂತ್ರಿಕ ಮತ್ತು ಆರ್ಥಿಕ ಬಿಡ್ ದಸ್ತಾವೇಜುಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಲಿಖಿತ ಅರ್ಜಿ ಮೂಲಕ ನಿಗದಿಪಡಿಸಿದ ಇ.ಎಂ.ಡಿ. ಮೊತ್ತವನ್ನು ಡಿ.ಡಿ. ಅಥವಾ ಬ್ಯಾಂಕ್ ಚೆಕ್ಕನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಹೆಸರಿಗೆ ಪಡೆದು ಖಾಲಿ ದಸ್ತಾವೇಜು ಪಡೆಯುವ ಸಮಯದಲ್ಲಿ ಸಲ್ಲಿಸುವುದು. ಅಯಶಸ್ವಿ ಬಿಡ್‌ದಾರರ ಇ.ಎಂ.ಡಿ. ಮೊತ್ತವನ್ನು ಟೆಂಡರ್ ತೆರೆದ ದಿನಾಂಕದಿಂದ 90 (ತೊಂಭತ್ತು) ದಿನಗಳೊಳಗಾಗಿ ಹಿಂದಿರುಗಿಸಲಾಗುವುದಿಲ್ಲ.

**ಕಾಮಗಾರಿಯ ವಿವರಗಳು**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ದ್ವಿ ಪ್ರತಿಗಳು) ತೆರಿಗೆ ಪ್ರತ್ಯೇಕ (ಹಿಂದಿರುಗಿಸಲಾಗದು) (ರೂ.ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸ ಬೇಕಾದ ಅವಧಿ (ಮಳೆಗಾಲ ಹೊರತುಪಡಿಸಿ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಮುದ್ದಾಪೂರ ಗ್ರಾಮದ ಹತ್ತಿರ ಏ.ನೀ.ಯೋ.ಯ ನಿರ್ಮಾಣ ಕಾಮಗಾರಿಯ ರೈಸಿಂಗ್ ಮೇನ್‌ಗೆ ಪಿ.ಎಸ್.ಸಿ. ಪೈಪುಗಳನ್ನು ಉತ್ಪಾದಿಸಿ, ಸರಬರಾಜು ಮಾಡಿ ಇಳಿಸುವುದು ಹಾಗೂ ಸ್ಪೆಷಲ್ ಇತ್ಯಾದಿಗಳ ಜೊತೆ ಜೋಡಿಸುವುದು (ಜೋಡಣೆಗಾಗಿ ಬೇಕಾದ ಮಣ್ಣು ಅಗೆತದ ಕೆಲಸವೂ ಸೇರಿ) | 103.73 | 1.04 | 10000 + ಕೆ.ಎಸ್.ಟಿ. | ಒಂದನೇ ದರ್ಜೆ | 12 ಕ್ಯಾಲೆಂಡರ್ ತಿಂಗಳು |

ಎರಡು ಲಕೋಟೆ ಟೆಂಡರ್ ಸಲ್ಲಿಸುವಲ್ಲಿ ತಾಂತ್ರಿಕ ಬಿಡ್ ಭಾಗ-1 ಮತ್ತು ಆರ್ಥಿಕ ಬಿಡ್ ಭಾಗ-2 ಎಂಬ ಪದ್ಧತಿಯನ್ನು ಅನುಸರಿಸುವುದು. ತಾಂತ್ರಿಕ ಬಿಡ್ಡಿನ ಮೌಲ್ಯ ಮಾಪನವನ್ನು ಅರ್ಜಿದಾರರು ಸಲ್ಲಿಸಿರುವ ವಿವರಗಳ ಆಧಾರದ ಮೇಲೆ ಮಾಡಲಾಗುವುದು.

ಗುತ್ತಿಗೆದಾರರು ಖಾಲಿ ಟೆಂಡರ್ ದಸ್ತಾವೇಜುಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿಯಿಂದ ಖಾಲಿ ಟೆಂಡರ್ ದಸ್ತಾವೇಜುಗಳಿಗೆ ನಿಗದಿಪಡಿಸಿದ ಮೊತ್ತವನ್ನು (ಹಿಂದಿರುಗಿಸಲಾಗುವುದಿಲ್ಲ) ದಸ್ತಾವೇಜುಗಳನ್ನು ಪಡೆಯಬಹುದು.

**ಹಣ ಪಾವತಿಸುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್ ಚೆಕ್ ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಯಾವುದೇ ಶೆಡ್ಯೂಲ್ಡ್ ಬ್ಯಾಂಕಿನಿಂದ ನಗದೀಕರಿಸುವಂತಾಗಿರತಕ್ಕದ್ದು.

1) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 20.06.2005
2) ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ಕೊನೆಯ ದಿನಾಂಕ: 27.06.2005
3) ಭರ್ತಿ ಮಾಡಿದ ಮೊಹರಬಂದ ಟೆಂಡರ್ ದಸ್ತಾವೇಜುಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 06.07.2005
4) ಭರ್ತಿ ಮಾಡಲಾದ ಟೆಂಡರ್‌ಗಳನ್ನು ಈ ಕೆಳಕಾಣಿಸಿದ ಕಾರ್ಯಾಲಯಗಳಲ್ಲಿಯೂ
   (ಅ) ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಾರ್ಯಾಲಯದಲ್ಲಿ
   (ಬ) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾ ಇವರ ಕಾರ್ಯಾಲಯದಲ್ಲಿ
   (ಕ) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪೂರ ಇವರ ಕಾರ್ಯಾಲಯದಲ್ಲಿ ನಿಗದಿಪಡಿಸಿದ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸುವುದು.
5) ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಹೆಸರಿಗೆ ಪಡೆದಿರಬೇಕು. ಮಾನ್ಯತೆ ಹೊಂದಿರದ ಇ.ಎಂ.ಡಿ. ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ರದ್ದುಗೊಳಿಸಲಾಗುವುದು. ಈ ಇ.ಎಂ.ಡಿ. ಯನ್ನು ಟೆಂಡರ್ ತೆರೆದ ದಿನಾಂಕದಿಂದ 180 (ಒಂದುನೂರ ಎಂಭತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು.
6) ಈ ಕೆಳಕಂಡ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.
   ಅ) ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರ.
   ಬ) ಇತ್ತೀಚಿನ ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.
   ಕ) ಕರ್ನಾಟಕ ರಾಜ್ಯದ ಇತ್ತೀಚಿನ ಸೇಲ್ಸ್‌ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.

   ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ದಿನಾಂಕ: 23.06.2005 ಅಥವಾ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು.

7) ತಾಂತ್ರಿಕ ಬಿಡ್ಡ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿಯಲ್ಲಿ ದಿನಾಂಕ: 06.07.2005 ರಂದು ಮಧ್ಯಾಹ್ನ 4.00 ಗಂಟೆಗೆ ಅಥವಾ ಸಾಧ್ಯವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಭಾಗ-1**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳ ಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1) ವೈಯಕ್ತಿಕ ಫರ್ಮ / ಸಂಯುಕ್ತ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಪ್ರತಿಯೊಬ್ಬರು ಕೆಳಗಿನ ವಿವರ ಹೊಂದಿರಬೇಕು.

2004-05ನೇ ಆರ್ಥಿಕ ಸಾಲಿನ ಹಿಂದಿನಿಂದ 5 ವರ್ಷಗಳ ವಹಿವಾಟಿನ ವಿವರ: (2000-01 ರಿಂದ 2004-05)

1) ಕನಿಷ್ಠ ಎರಡು ಆರ್ಥಿಕ ವರ್ಷದಲ್ಲಿ ರೂ.210.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ಸಿವಿಲ್ ನಿರ್ಮಾಣ ಕಾಮಗಾರಿಗಳಿಗೆ ಮಾತ್ರ) ವಾರ್ಷಿಕ ವಹಿವಾಟು ಮಾಡಿರಬೇಕು.

(1) ಕಳೆದ 5 ವರ್ಷಗಳಲ್ಲಿ ವರ್ಷ 2004-05ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಶೇಕಡಾ 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.

(2) ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೇ ಒಂದು ಏ.ನೀ.ಯೋ. ಕಾಮಗಾರಿ (ಶೇಕಡಾ 90 ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ. ಪಿ.ಎಸ್.ಸಿ. ಪೈಪ್‌ಗಳ ಉತ್ಪಾದಿಸಿ ಸರಬರಾಜು ಮಾಡಿ, ಜೋಡಿಸುವುದು. 2004-05ನೇ ಸಾಲಿನ ದರಗಳ ಮಟ್ಟಕ್ಕೆ) ರೂ.90.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪೂರ್ಣಗೊಳಿಸಿರಬೇಕು. ಪ್ರಮುಖ ಗುತ್ತಿಗೆದಾರರೆಂದರೆ ಕಾಮಗಾರಿಯನ್ನು ಸ್ವತಃ ನಿರ್ಮಿಸಿ ಸ್ವಂತ ಅವರ ಹೆಸರಿನಲ್ಲಿ ಬಿಲ್ಲನ್ನು ಪಡೆದಿರತಕ್ಕದ್ದು.

(3) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | | |
|---|---|---|
| (ಅ) ಅಗೆತದ ಕೆಲಸ | = | 4750 ಘ.ಮೀ. |
| (ಬ) ಪಿಎಸ್‌ಸಿ ಪೈಪ್‌ಗಳ ತಯಾರಿಕೆ ಮತ್ತು ಜೋಡಣೆ | = | 1800 ಮೀಟರ್‌ಗಳು |

2) ಅರ್ಜಿದಾರರು ಪ್ರದರ್ಶಿಸುವುದು.

(ಅ) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನೀಯರಿಂಗ್ ಕಾಮಗಾರಿಯ ಇಂತಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರು ಹೊಂದಿರಬೇಕು.

(ಆ) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ತಿ ಅಥವಾ ಹಣರೂಪದಲ್ಲಿ ಕನಿಷ್ಠ ರೂ.35.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್-ಲೈನ್ಸ್ / ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು)

3) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಸಿಕೊಳ್ಳತಕ್ಕದ್ದು.

4) ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ದಸ್ತಾವೇಜುಗಳ ಪ್ರಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರು ದೃಢೀಕರಿಸಿ ಸಹಿ ಮಾಡತಕ್ಕದ್ದು. ದಸ್ತಾವೇಜುಗಳ ಮೇಲೆ ಗುತ್ತಿಗೆದಾರರಿಂದ ದೃಢೀಕರಿಸಿ ಸಹಿ ಮಾಡದಿದ್ದಲ್ಲಿ ಅಂತಹ ದಸ್ತಾವೇಜುಗಳನ್ನು ತಾಂತ್ರಿಕ ಮೌಲ್ಯ ಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ.

ಆರ್ಥಿಕ ಬಿಡ್ಡ್ (ಭಾಗ-2) ರಲ್ಲಿ 2 ಭಾಗಗಳಿದ್ದು, ಭಾಗ-1 (ಭಾಗ-2) ರಲ್ಲಿ ಆರ್ಥಿಕ ಬಿಡ್ಡು ಇದ್ದ ಗುತ್ತಿಗೆದಾರರು ಐಟಂವಾರು ದರಗಳನ್ನು ಗುತ್ತಿಗೆಗೆ ಇಟ್ಟ ವಿವರಣೆಯ ಪ್ರಕಾರ ಶೆಡ್ಯೂಲ್ 'ಎ' ಮತ್ತು ಶೆಡ್ಯೂಲ್ 'ಬಿ' ಆಧಾರದ ಮೇಲೆ ನಮೂದಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಮಾಡುವುದು ಅಥವಾ ತಮ್ಮದೇ ಆದ ನಿಬಂಧನೆಗಳನ್ನು ಆರ್ಥಿಕ ಬಿಡ್ಡಿನ ಭಾಗ-1 ರಲ್ಲಿ ಮಾಡತಕ್ಕದ್ದಲ್ಲ. ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್ಡ್ ಭಾಗ-2 ಮಾತ್ರ ದಿನಾಂಕ: 15.07.2005 ರಂದು ಬೆಳಿಗ್ಗೆ 10.00 ಗಂಟೆಗೆ ತೆರೆಯಲಾಗುವುದು.

5) ಅಂಚೆ / ಕೊರಿಯರ್ ಮೂಲಕ ಟೆಂಡರ್ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.

6) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕವೆಂದು ಪರಿಗಣಿಸುವುದು.

7) ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ್ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

8) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು.

9) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶಃ ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆ ಅಧೀನಕ್ಕೆ ಸ್ವಾಧೀನತೆಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತಃ ಸಂಧಾನದ ಮೂಲಕ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕಾಮಗಾರಿ ಪ್ರಾರಂಭಿಸಬೇಕು. ಭೂಸ್ವಾಧೀನ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ ಎಂಬುವುದು ಗಮನಿಸತಕ್ಕದ್ದು.

10) ಗುತ್ತಿಗೆದಾರರು ಟೆಂಡರ್ ನಲ್ಲಿ ಭಾಗವಹಿಸುವ ಮೊದಲು ಕಾಮಗಾರಿ ಸ್ಥಳವನ್ನು ಪರಿವೀಕ್ಷಣೆ ಮಾಡಿ ಭಾಗವಹಿಸುವುದು. ನಂತರ ಕಾಮಗಾರಿಯ ಸ್ಥಳದ ಬಗ್ಗೆ ಯಾವುದೇ ತಂಟೆ ತಕರಾರುಗಳಿಗೆ ಇಲಾಖೆಯು ಜವಾಬ್ದಾರವಾಗುವುದಿಲ್ಲ.

11) ಟೆಂಡರ್ ಡಾಕ್ಯೂಮೆಂಟಿನ ಭಾಗ-2ರ ಸೆಕ್ಷನ್-1 ರಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳು ತಿರಸ್ಕರಿಸಲಾಗುವುದು.

12) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

13) ಎರಡೂ ಲಕೋಟೆ ಮೇಲೆ ಕೆಲಸದ ಹೆಸರು ಹಾಗೂ ಲಕೋಟೆ-1 ಹಾಗೂ ಲಕೋಟೆ-2 ಎರಡು ಸ್ಪಷ್ಟವಾಗಿ ಬರೆಯತಕ್ಕದ್ದು.

**ಅಣ್ಣಪ್ಪ ಎ.ಕೆ.**

ಪಿ.ಆರ್. 318 ಕಾರ್ಯಪಾಲಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ.